# ಸಿದ್ಧಗಂಗಾ



ಅಂತರ ರಾಷ್ಟ್ರೀಯ ಆರ್ಥಿಕ ಸಂಬಂಧಗಳಲ್ಲಿರುವ ಅಸಮಾನತೆ ಮತ್ತು ಶೋಷಣೆಗಳನ್ನು ತೊಡೆದುಹಾಕಿ ಅವುಗಳನ್ನು
ಪುನರ್ ರಚಿಸಬೇಕೆಂಬ ಮಹತ್ವಾಕಾಂಷೆ ಹೊಂದಿದ್ದ ರಷ್ಯಾದ ಮಹಾನ್ ಸಮಾಜವಾದಿ
ರಾಷ್ಟ್ರೀಯ ನೇತಾರ ವಿ. ಇ. ಲೆನಿನ್ ಅವರ ಜ್ಞಾಪಕಾರ್ಥ.

ಡಿಸೆಂಬರ್, 1980

# ಸಿದ್ಧಗಂಗಾ

## ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

801 ಶ್ರೀ ಎಸ್. ಬಿ. ಆಲೂರ್ ಅಂಡ್ ಕೋ,
ಮರ್ಚೆಂಟ್ಸ್ ಬ್ಯಾಡಗಿ, ಧಾರವಾಡ ಜಿಲ್ಲೆ.

802 ಶ್ರೀ ಡಾ॥ ಸಿ. ಎಸ್. ಪುರಾಣ ಮಠ.
ಮಂಜುನಾಥ ಕ್ಲಿನಿಕ್, ರಾಣಿಬೆನ್ನೂರ್,
ಧಾರವಾಡ ಜಿಲ್ಲೆ.

803 ಶ್ರೀ ಡಾ॥ ಹೆಚ್. ಜಿ. ಶ್ರೀಕಂಠಪ್ಪ. M.B B.S.
ಲೋಕಿಕೆರೆ, ದಾವಣಗೆರೆ.
ಚಿತ್ರದುರ್ಗ ಜಿಲ್ಲೆ.

804 ಶ್ರೀ ಬಿ. ದೇವರಾಜ್, S/o ಶ್ರೀ ಕೆ. ಪುಟ್ಟಣ್ಣ,
ಮರ್ಚೆಂಟ್ಸ್ ವಿಜಯಪುರ,
ಬೆಂಗಳೂರು ಜಿಲ್ಲೆ.

805 ಶ್ರೀಮತಿ ಕೆ. ಎಸ್. ಸುನಂದಮ್ಮ.
W/o ನಂಜುಂಡಪ್ಪ ಗೌ॥ ಹೈಸ್ಕೂಲ್,
ಎಲಹಂಕ, ಬೆಂಗಳೂರು ಜಿಲ್ಲೆ.

806 ಶ್ರೀ ಆರ್. ಸಿ. ಹನುಮಂತ ಶೆಟ್ರು & ಸನ್ಸ್,
ರೈಸ್ ಮಿಲ್ ವ್ಯಾಪಾರಿಗಳು.
ಕೆ. ಆರ್. ನಗರ, ಮೈಸೂರು ಜಿಲ್ಲೆ.

807 ಶ್ರೀ ಜಿ. ಎಸ್. ಗಂಗಣ್ಣ, ಶಿಕ್ಷಕರು
S/o ಶ್ರೀ ಸಿದ್ದಪ್ಪ ಗೂಳೂರು,
ತುಮಕೂರು ಜಿಲ್ಲೆ.

808 ಶ್ರೀ ಕೆ. ಎಸ್. ರಾಮಚಂದ್ರಯ್ಯ, ಶಿಕ್ಷಕರು
S/o ಶ್ರೀ ಸಿದ್ದಪ್ಪ. ಕೈದಾಳ,
ತುಮಕೂರು ಜಿಲ್ಲೆ.

809 ಶ್ರೀ ತಿಮ್ಮರಸಪ್ಪ ಮಾದವಾರ,
ನೆಲಮಂಗಲ ॥ತಾ॥, ಬೆಂಗಳೂರು ಜಿಲ್ಲೆ.

810 ಶ್ರೀ ಡಿ. ಮುನಿರಂಗಪ್ಪ.
ಕೋರಾ. ತುಮಕೂರು ಜಿಲ್ಲೆ.

811 ಶ್ರೀ ಡಾ॥ ಸಿ. ಅಶ್ವತ್. ಶುಶ್ರೂಷೆ.
ಹುಬ್ಬಳ್ಳಿ-22

812 ಶ್ರೀ ಬಿ. ಸೋಮಶೇಖರ. ಕೆ. ಇ. ಬಿ
ಶಿಂಷಾಪುರ; ಮಂಡ್ಯ ಜಿಲ್ಲೆ.

813 ಶ್ರೀ ಎಂ. ನಂಜಪ್ಪ ಶೆಟ್ಟಿ, ಕಾಫಿಪ್ಲಾಂಟರ್,
ಚಿಕ್ಕಮಗಳೂರು.

814 ಶ್ರೀ ಉಮಾಶಂಕರ್ ಬೀರಂಗಿಪಾಳ್ಯ,
ಶಿವನಹಳ್ಳಿ ರಾಜಾಜಿನಗರ.
ಬೆಂಗಳೂರು–10

815 ಶ್ರೀ ಎನ್. ಶಿವಣ್ಣ
ರಾಜಾಜಿನಗರ, ಬೆಂಗಳೂರು--10

(ಮುಂದುವರಿಯುತ್ತದೆ)



# ಶ್ರೀವಾಣಿ

ಜಗತ್ತಿನ ಎಲ್ಲ ಮಹಾಪುರುಷರ ಜೀವನದಲ್ಲಿ ಹೆಣ್ಣಿನ ಪ್ರಭಾವಮುದ್ರೆಯನ್ನು ಕಾಣಬಹುದು. ಹೆಣ್ಣು ತಾನು ತಾಯಿಯಾಗಿ, ಪತ್ನಿಯಾಗಿ ಅವರ ಮೇಲೆ ಸತ್ಪ್ರಭಾವವನ್ನು ಬೀರಿದ್ದಾಳೆ. ಅವರ ಬಾಳು ಬೆಳಗಲು ತನ್ನ ತ್ಯಾಗ ಮತ್ತು ಸಹನಾಗುಣಗಳಿಂದ ಶ್ರಮಿಸಿದ್ದಾಳೆ. ರವಿಂದ್ರರು ಒಂದು ಕಡೆ ಹೆಣ್ಣಿನ ತ್ಯಾಗ ಮತ್ತು ಜವಾಬ್ದಾರಿಗಳ ಬಗ್ಗೆ– ' The Woman is the embodiment of service and sacrifice ' ಎಂಬುದಾಗಿ ನುಡಿದಿದ್ದಾರೆ. ಮತ್ತು ಅದನ್ನು ಮಹಿಳೆ ಹೇಗೆ ನಿರ್ವಹಿಸಬಲ್ಲಳೆಂಬುದಕ್ಕೆ ತಮ್ಮ ಅನೇಕ ಕೃತಿಗಳಲ್ಲಿ ಸಮರ್ಥನೆ ನೀಡಿದ್ದಾರೆ. ಮಹಾತ್ಮಾಗಾಂಧಿಯವರು ಕೂಡ ಹೆಣ್ಣಿನಿಂದ ಪ್ರಭಾವಿತರಾಗಿದ್ದಾರೆ. ಗಾಂಧೀಜಿ ಚಿಕ್ಕವರಾಗಿದ್ದಾಗ ಅವರನ್ನು ಸಾಕುತ್ತಿದ್ದ ರಂಭಾ ಎಂಬ ದಾದಿಯಿಂದ ಪ್ರಭಾವಿತರಾದರು. ಎಳೆಯವರಿದ್ದಾಗ ಗಾಂಧಿ ತುಂಬಾ ಹೆದರುತ್ತಿದರು. ಕತ್ತಲುಕಂಡರೆ ನಡುಗುತ್ತಿದ್ದರು. ದಾದಿ ಅವರಿಗೆ ಧೈರ್ಯ ತುಂಬಿದಳು. " ಭಯವಾದಾಗ ರಾಮನಾಮವನ್ನುಸ್ಮರಿಸು. ಧೈರ್ಯತಾನಾಗಿಯೇ ಬರುತ್ತದೆ " ಎಂದು ಮಗುವಿನ ಮುಗ್ಧಮನದಲ್ಲಿ ದೇವರನಾಮದ ಬೀಜ ಬಿತ್ತಿದಳು. ಗಾಂಧೀಜಿಯವರ ಮೇಲೆ ಪ್ರಭಾವಬೀರಿದ ಎರಡನೆಯ ಹೆಣ್ಣು ಅವರ ತಾಯಿ. ಗಾಂಧೀಜಿ ಪರದೇಶಕ್ಕೆ ಹೋದಾಗ ಆಕೆ ಮೂರು ಕಟ್ಟಳೆಗಳನ್ನು ಹಾಕಿ ಆಣೆ ಮಾಡಿಸಿದಳು. ಒಂದನೆಯದು ಮದ್ಯಪಾನ ಮಾಡಬಾರದು. ಎರಡನೆಯದು ಮಾಂಸತಿನ್ನಬಾರದು. ಮೂರನೆಯದು ಪರಸ್ತ್ರೀಸಂಗಮಾಡಬಾರದು. ಗಾಂಧೀಜಿಯವರ ವಿದೇಶಜೀವನದಲ್ಲಿ ಅವರ ಧೃಡಚಿತ್ತವನ್ನು ಅಲುಗಾಡಿಸುವ ಪ್ರಸಂಗಗಳು ಘಟಿಸಿದಾಗ ತಾಯಿಯವಚನವನ್ನು ನೆನೆಸಿಕೊಂಡು ಪಾರಾಗುತ್ತಿದರು. ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಮೂರನೆಯ ಮಹಿಳೆಯೆಂದರೆ ಅವರ ಸತಿ ಕಸ್ತೂರಿಬಾ. ಅವರೇ ಹೇಳಿದ್ದಾರೆ–" ನನಗೆ ಸತ್ಯಾಗ್ರಹದ ಕಲ್ಪನೆಬಂದದ್ದು, ನನ್ನ ಸತಿಯಿಂದ " ಎಂದು ಹೀಗೆ ಮಹಾತ್ಮರ ಜೀವನದಲ್ಲಿ ಮಹಿಳೆಯ ಪಾತ್ರ ಬಹುದೊಡ್ಡದು.

ಹೆಣ್ಣು ಕುಟುಂಬದ ಕಣ್ಣು, ಅವಳು ಬುದ್ಧಿವಂತಳಾಗಿ ತನ್ನ ಮಕ್ಕಳನ್ನು ಸತ್ಪ್ರಜೆಯನ್ನಾಗಿ ಬೆಳೆಸಿದರೆ ಆ ಕುಟುಂಬ ಹಸನಾಗುತ್ತದೆ. ಹೀಗೆ ಒಂದೊಂದು ಕುಟುಂಬವೂ ಹಸನಾದರೆ ಸಮಾಜ ಹಸನಾಗುವುದು ತನ್ಮೂಲಕ ರಾಷ್ಟ್ರವೂ ಹಸನಾದೀತು.

# 'ಸಿದ್ಧಗಂಗಾ'

ಡಿಸೆಂಬರ್ ೧೯೮೦

ಸಂಪುಟ–೧೬ ಸಂಚಿಕೆ–೧೨

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: ~~**10-00**~~ ರೂ
Rs 12 00


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೆಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ–572104 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572104 ತುಮಕೂರು ಜಿಲ್ಲೆ.

# ಸಂಪಾದಕೀಯ

ವಿಶ್ವವಿಭೂತಿ ಬಸವಣ್ಣನವರ ಜನನ ಮಾನವ ಜಗತ್ತಿಗೊಂದು ಮಂಗಳಮುಹೂರ್ತ. ನಾಡಿಗೊಂದು ಹೊಸ ಚೈತನ್ಯ. ಬಸವಣ್ಣನವರು ತಮ್ಮ ಜೀವಿತ ಕಾಲವನ್ನು ವಿಶ್ವಮಾನವನ ಉದ್ಧಾರಕ್ಕಾಗಿ ದುಡಿದ ಮಾನವ ಪ್ರೇಮಿಗಳ ಪಂಕ್ತಿಯಲ್ಲಿ ಒಬ್ಬರು. ಬಸವಣ್ಣನವರ ಜನ್ಮಭೂಮಿ ಬಾಗೇವಾಡಿಯಾದರೆ ಕರ್ಮಭೂಮಿ ಕಲ್ಯಾಣ. ಅಂತೆಯೇ ಪುಣ್ಯಭೂಮಿ ಕೂಡಲಸಂಗಮ. ಕೂಡಲಸಂಗಮವನ್ನು ಕಪ್ಪಡಿ ಸಂಗಮವೆಂದೂ, ಸಂಗಮವೆಂದೂ ಕರೆಯುವ ರೂಢಿಯಿದೆ. ಮಲಪ್ರಹರಿ, ಕೃಷ್ಣ ಈ ಎರಡು ನದಿಗಳು ಕೂಡುವ ಸ್ಥಳವೇ ಕೂಡಲಸಂಗಮ. ಇದೊಂದು ಪವಿತ್ರಸ್ಥಳ, ಸಾಧಕರಿಗೆ ಆತ್ಮದ ಅರಿವಿನ ಸ್ಫೂರ್ತಿಯ ತಾಣ. ಅಲ್ಲಿನ ಕ್ಷೇತ್ರಾಧಿಪತಿ ಸಂಗಮೇಶ್ವರ. ಬಸವಣ್ಣನವರ ಜೀವನಸಿದ್ಧಿ ಹಣ್ಣಾಗುವುದಕ್ಕೆ ಕೂಡಲಸಂಗಮದೇವನ ಕೃಪೆಯೇ ಕಾರಣ.

ಕೂಡಲಸಂಗಮ ಕೇವಲ ಎರಡು ನದಿಗಳ ಸಂಗಮವಲ್ಲ ಅದೊಂದು ವೈಶಿಷ್ಟ್ಯಪೂರ್ಣ ಸಂಗಮಕ್ಷೇತ್ರ. ಕೃಷ್ಣೆ, ಮಲಪ್ರಭಾಗಳು ಒಟ್ಟುಗೂಡಿ ಸಂಗಮೇಶ್ವರನ ಅಡಿಯಲ್ಲಿ ಎರಗಿದ ಸಂಗಮ. ಹಲವು ಭಕ್ತಭಾವುಕರು ಕೃಷ್ಣ ಮಲಪ್ರಭಾ ಪುಣ್ಯನದಿಗಳಲ್ಲಿ ಮಿಂದು ತಮ್ಮ ಪಾಪ ಪರಿಹಾರ ಮಾಡಿಕೊಳ್ಳಲು ಒಟ್ಟುಗೂಡುವ ಸಂಗಮ. ತನ್ನ ಬಾಳಿನ ಗುರಿಯನ್ನು ಮುಟ್ಟಲು ಮಾರ್ಗ ತೋರಿಸುವ ಗುರುವನ್ನು ಕಂಡು ಅರಿವನ್ನು ಮಾಡಿಸಿದ ಗುರುಶಿಷ್ಯರ ಸಮಾಗಮದ ಕ್ಷೇತ ಸಂಗಮ. ಪತಿ ಬಸವಣ್ಣ ಪತ್ನಿ ನೀಲಮ್ಮನ ಕೊನೆಯುಸಿರೆಳೆದ ಸಂಗಮ. ಎಲ್ಲಕ್ಕೂ ಮಿಗಿಲಾಗಿ ಬಸವಣ್ಣನವರ ಅತ್ಮಜ್ಯೋತಿಯು ಕ್ರಮ ಕ್ರಮವಾಗಿ ವಿಕಾಸಗೊಂಡು ಪರಂಜ್ಯೋತಿಯಲ್ಲಿ ಸೇರಿದ ಸಂಗಮ. ಸಣ್ಣ ತೊರೆ ದೊಡ್ಡ ತೊರೆಯನ್ನು ಹರಿಸಿಕೊಂಡು ಹೋಗಿ ಒಂದೆಡೆ ಸೇರುವುದು ನಿಸರ್ಗದ ನಿಯಮ. ಅಂತೆಯೇ ನದಿಗಳು ಸಮುದ್ರವನ್ನು ಸೇರುತ್ತವೆ. ಬಿಂದುವು ಸಿಂಧುವಿನಲ್ಲಿ ಸೇರಿ ಸಿಂಧುವೇ ಆಗುತ್ತದೆ. ಒಂದು ಸಿಂಧುವಿನ ಸಂಗಮದ ನಿಸರ್ಗದಲ್ಲಿ ಮಾನವನ ಬಾಳಿನ ಸಂಗಮದ ಸಫಲತೆಯ ತತ್ವವಡಗಿದೆ.

ಮಾನವೀಯ ಬಾಳಿನ ಸಂಗಮವನ್ನು ಸಾಧಿಸಲು ಬಸವಣ್ಣನವರು ತಮ್ಮ ಬಾಳನ್ನು ಮುಡುಪಾಗಿಟ್ಟರು. ತಮ್ಮ ಬಾಳಿನಲ್ಲಿ ಸಮರಸವನ್ನು ರೂಪಿಸಿಕೊಂಡುದು ಮಾತ್ರವಲ್ಲ, ತಮ್ಮ ಕಾಲದಲ್ಲಿ ವಿವಿಧ ದಿಸೆಗಳಲ್ಲಿ ಇಕ್ಕಟ್ಟಾಗಿ ಹರಿಯುತ್ತಿದ್ದ ಹಲವು ಶೈವ ಧಾರ್ಮಿಕ, ವೈಚಾರಿಕ ಪ್ರವಾಹಗಳಲ್ಲಿಯೂ ಸಂಗಮವನ್ನು ಸಾಧಿಸಲು ಅವರು ಶ್ರಮಿಸಿದರು. ಸಾಂಪ್ರದಾಯಿಕ ಮೂಢ ಶ್ರದ್ಧೆಗಳನ್ನು ಅವರು ಕೆಚ್ಚಿನಿಂದ ಪ್ರತಿಭಟಿಸಿದರು. ಇದರಿಂದ ಸಮಾಜದಲ್ಲಿ ಹಲವು ವಿಧವಾದ ಮಂಥನ ಕಾರ್ಯಗಳು ನಡೆದವು. ಸಮಾಜದಲ್ಲಿ ಹಲವು ವಿಧ ಸಾಮಾಜಿಕ ಕ್ರಾಂತಿ ಜರುಗಿತು. ಈ ಕ್ರಾಂತಿಯ ಸಂಗಮ ಬಿಂದು, ಬಸವಣ್ಣನವರು. ಹೀಗೆ ಮಾನವಕುಲದ ಉದ್ಧಾರಕ್ಕೆ ಸರ್ವಸ್ವವನ್ನು ಮುಡುಪಾಗಿಟ್ಟ ಪುಣ್ಯ ಪುರುಷರ ನೆನಪಿಗಾಗಿ ಹಲವು ಸ್ಮಾರಕಗಳನ್ನು ನಿರ್ಮಾಣ ಮಾಡುತ್ತಿದ್ದೇವೆ. ಈಗ ನಾವು ಮಾಡಬೇಕಾದ ಆ ಕಾರ್ಯವನ್ನು ನಮ್ಮ ಹಿಂದಿನವರು ಮಾಡಿದ್ದನ್ನು ಉಳಿಸಿಕೊಂಡು ಬಂದಿರುವ ಬಸವಣ್ಣನವರ ಸಮಾಧಿಸ್ಥಾನವೆಂದು ಹೇಳುವ ಕೂಡಲಸಂಗಮವನ್ನು ನಾವು ಉಳಿಸಿಕೊಂಡು ಬರುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈ ದಿಸೆಯಲ್ಲಿ ಸಾರ್ವಜನಿಕರು ನಮ್ಮ ಘನ ಸರ್ಕಾರವು ಗಮನವನ್ನು ಹರಿಸಿ ಈಗಾಗಲೇ ಕೈಗೊಂಡಿರುವ ಕಾರ್ಯವು ಸ್ಮಾರಕವನ್ನ ಉಳಿಸುವ ಮಹತ್ವದ ಕೆಲಸವು ಯಶಸ್ವಿಯಾಗಲೆಂದು ಆಶಿಸೋಣ.

# ಪ್ರೌಢ ಶಾಲೆಗಳಲ್ಲಿ ಸಂಸ್ಕೃತ ವಿದ್ಯಾಭ್ಯಾಸದ ಸ್ಥಾನ

—ಎಸ್. ಪಿ. ಸತೀಶ್ ನಿರ್ದೇಶಕರು, ಪದವಿ-ಪೂರ್ವ ಶಿಕ್ಷಣ ಮತ್ತು ಸಂಸ್ಕೃತ ವಿಭಾಗ.

['ಸಂಸ್ಕೃತ ವಿದ್ಯಾಭ್ಯಾಸ ಸಮಿತಿ' ಯ ಕೋರಿಕೆಯಂತೆ ದಿನಾಂಕ 16–10–1980 ರಂದು ಶ್ರೀಯುತರು ಸಮಿತಿಯ ಮುಂದಿಟ್ಟ ಲಿಖಿತ ಅನಿಸಿಕೆಗಳು]

**1. ಸಂಸ್ಕೃತ ಶಾಲಾ ಪಠ್ಯವಸ್ತುವಿನಲ್ಲೂ ಅಭ್ಯಾಸದ ವಿಷಯವಾಗಿ ಉಳಿಯಬೇಕೆ ?**

ಸಂಶಯವೇ ಇಲ್ಲ. ಸಂಸ್ಕೃತ ಶಾಲಾ ಪಠ್ಯ ವಸ್ತುವಿನಲ್ಲಿ ಅಭ್ಯಾಸದ ವಿಷಯವಾಗಿ ಉಳಿಯಲೇಬೇಕು. ಶಾಲಾ ಪಠ್ಯವಸ್ತುವಿನಲ್ಲಿಲ್ಲದಿದ್ದರೆ ಅದು ಎಲ್ಲಿರಬೇಕೆಂಬ ಪ್ರಶ್ನೆ ಉದ್ಭವಿಸುತ್ತದೆ.

**2. ಉಳಿಯಬೇಕಾದರೆ ಕನ್ನಡಕ್ಕೆ ಪರ್ಯಾಯ ಭಾಷೆಯಾಗದೇ ಉಳಿಸುವುದು ಹೇಗೆ ?**

ಇಂಗ್ಲೀಷ್, ಮರಾಠಿ, ತೆಲುಗು, ತಮಿಳು, ಉರ್ದು, ಹಿಂದಿಗಳಂತೆ ಸಂಸ್ಕೃತವೂ ಪ್ರಥಮ ಭಾಷಾ ಸ್ಥಾನದಲ್ಲಿರಬೇಕು. ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ತೆಗೆದುಕೊಂಡವರು ತೃತೀಯ ಭಾಷೆಯಾಗಿ ಸಾಮಾನ್ಯವಾಗಿ ಕನ್ನಡವನ್ನು ತೆಗೆದುಕೊಳ್ಳುತ್ತಾರೆ. ಸಂಸ್ಕೃತ ಕನ್ನಡಕ್ಕೆ ಪರ್ಯಾಯ ಭಾಷೆಯಾಗಿದ್ದರೆ ತೊಂದರೆಯಿಲ್ಲ. ವಾಸ್ತವಿಕವಾಗಿ ಹೇಳುವುದಾದರೆ ಸಂಸ್ಕೃತಾಭ್ಯಾಸ ಕನ್ನಡದ ಸಂವರ್ಧನೆಗೆ ಮಾರಕವಲ್ಲ. ಸಂಸ್ಕೃತ ಮತ್ತು ಕನ್ನಡ ಎರಡನ್ನೂ ಕಲಿಯುವುದರಿಂದ ವಿದ್ಯಾರ್ಥಿಯ ಭಾಷಾ ಪ್ರಭುತ್ವ, ಲಾಲಿತ್ಯ ಮತ್ತು ಗಾಂಭೀರ್ಯತೆಗಳು ಹೆಚ್ಚುತ್ತವೆ. ಇದರಿಂದ ಸಮಾಜದಲ್ಲಿ ಸಂಸ್ಕೃತ ಮತ್ತು ಕನ್ನಡಗಳನ್ನು ಬಲ್ಲ ವಿದ್ವಜ್ಜನರ ಸಂಖ್ಯೆ ಹೆಚ್ಚಿದಂತಾಗುತ್ತದೆ. ಸಂಸ್ಕೃತ ಇಂದು ನೆನ್ನೆಯಿಂದ ಭೋಧನೆಯ ವಿಷಯವಾಗಿಲ್ಲ. ಅನಾದಿ ಕಾಲದಿಂದ ಇದೆ. ವಿಷಾದದ ಮತ್ತು ವಿಪರ್ಯಾಸದ ವಿಷಯವೆಂದರೆ ಸಂಸ್ಕೃತ ಪಠ್ಯವಸ್ತು ಶ್ರೀಮಂತಗೊಂಡು, ಉನ್ನತ ಮಟ್ಟದ ಪಠ್ಯ ಪುಸ್ತಕಗಳು ರಚನೆಯಾಗಿರುವ ಸಮಯದಲ್ಲಿ ಪ್ರೌಢ ಶಾಲೆಗಳಲ್ಲಿ ಸಂಸ್ಕೃತ ವಿದ್ಯಾಭ್ಯಾಸದ ಬಗ್ಗೆ ವಿವಾದವೆದ್ದಿರುವಿಕೆ. ಈ ಹಂತದಲ್ಲಿ ಸಂಸ್ಕೃತ ಬೋಧನೆ ಕುಂಠಿತಗೊಂಡರೆ, ಕಿರಿಯ ಕಾಲೇಜುಗಳಲ್ಲಿ ಪದವಿ ಹಂತದಲ್ಲಿ ಹಾಗೂ ಸ್ನಾತಕೋತ್ತರ ಹಂತದಲ್ಲಿ ಸಂಸ್ಕೃತದ ಇರುವಿಕೆಗೆ ಗಂಡಾಂತರ ಉಂಟಾಗುವುದು ಸತ್ಯದ ಮಾತು.

**3. ಎಲ್ಲರಿಗೂ ಕನ್ನಡ ಕಡ್ಡಾಯ ಮಾಡಿ ಉಳಿದೆರಡು ಭಾಷೆಗಳ ಆಯ್ಕೆಯ ಸ್ವಾತಂತ್ರ್ಯವನ್ನು ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಬಿಡುವುದು ಸೂಕ್ತವೆ ?**

ಸೂಕ್ತವಲ್ಲ. ಕಾರಣ ಕಡ್ಡಾಯಗೊಂಡ ಕನ್ನಡದ ಮಟ್ಟ ತುಂಬಾ ಕಡಿಮೆಯಾಗಿರುತ್ತದೆ. ಆಗ ಕನ್ನಡದ ಪ್ರಾಧಾನ್ಯತೆ ಕಡಿಮೆಯಾಗುತ್ತದೆ. ಆಳವಾದ ಅಭ್ಯಾಸ ಸಾಧ್ಯವಾಗುವುದಿಲ್ಲ. ಉಳಿದೆರಡು ಭಾಷೆಗಳ ಆಯ್ಕೆಯ ಸ್ವಾತಂತ್ರ್ಯವನ್ನು ಕೊಟ್ಟರೆ ವಿದ್ಯಾರ್ಥಿಗಳು ಸಾಮಾನ್ಯವಾಗಿ ತಮ್ಮ ಮಾತೃ ಭಾಷೆ ಮತ್ತು ಇಂಗ್ಲೀಷ್‌ಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಆಗ ರಾಷ್ಟ್ರ ಭಾಷೆಯಾದ ಹಿಂದಿ ಬಿಟ್ಟು ಹೋಗುತ್ತದೆ. ಮೂರು ಭಾಷೆಗಳಿಗೆ ಸಮಾನತೆಯನ್ನು ಕೊಟ್ಟಿಲ್ಲ. ಮಾತೃಭಾಷೆಗೆ 150 ಅಂಕಗಳಿವೆ, ದ್ವಿತೀಯ ಭಾಷೆಗೆ 100 ಅಂಕಗಳಿವೆ. ತೃತೀಯ ಭಾಷೆಗೆ 50 ಅಂಕಗಳು ಮಾತ್ರ ಇವೆ. ಆದುದರಿಂದ ಈ ವಿಷಯ ಸೂಕ್ತವಾದುದಲ್ಲ. ಕರ್ನಾಟಕದಲ್ಲಿರುವ ಭಾಷಾ ನೀತಿ ಇತರ ಅನೇಕ ರಾಜ್ಯಗಳಿಗೆ ಮಾದರಿಯಾಗಿ ಪರಿಣಮಿಸಿದೆ ಆಂಧ್ರದವರು ಈ ನೀತಿಯನ್ನು ಅಳವಡಿಸಿಕೊಂಡಿದ್ದಾರೆ. ಅನೇಕ ದಶಕಗಳಿಂದ ಕಂಡು ಬಾರದ ಬೀತಿ ಇಂದೇಕೆ ಉದ್ಭವಿಸಿದೆ ಎಂಬುದು ಅರ್ಥವಾಗುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಈಗ ಇರುವ ಭಾಷಾ ನೀತಿ ಅತ್ಯುತ್ತಮವಾಗಿದೆ. ಯಾವ ಬದಲಾವಣೆಯೂ ಸೂಕ್ತವಲ್ಲ ಹಾಗೂ ಸಾಧ್ಯವಲ್ಲ.



# ನವನೀತ

1) ಪಾಪಾನ್ನಿ ವಾರಯತಿ ಯೋಜಯತೇ ಹಿತಾಯ
ಗುಹ್ಯಂ ನಿಗೂಹತಿ ಗುಣಾನ್ ಪ್ರಕಟೀಕರೋತಿ ।
ಆಪದ್ಗತಂಚ ನಜಹಾತಿ ದದಾತಿ ಕಾಲೇ
ಸನ್ಮಿತ್ರಲಕ್ಷಣಮಿದಂ ಪ್ರವದಂತಿ ಸಂತಃ ॥

ಕೆಟ್ಟ ಕೆಲಸಗಳಿಂದ ತಡೆಯುತ್ತಾನೆ. ಒಳ್ಳೆಯ ಕೆಲಸಗಳ್ಲಿ ಪ್ರೇರೇಪಿಸುತ್ತಾನೆ. ರಹಸ್ಯವಾದುದನ್ನು ರಹಸ್ಯವಾಗಿಡುತ್ತಾನೆ. ಒಳ್ಳೆಯ ಗುಣಗಳನ್ನು ಪ್ರಚಾರ ಮಾಡುತ್ತಾನೆ. ಆಪತ್ ಕಾಲದಲ್ಲಿ ಕೈಬಿಡುವುದಿಲ್ಲ. ಸಕಾಲದಲ್ಲಿ ಸಹಾಯ ಮಾಡುತ್ತಾನೆ; ಈ ಎಲ್ಲ ಗುಣಗಳನ್ನು ಒಳ್ಳೆಯ ಸ್ನೇಹಿತನ ಲಕ್ಷಣವೆಂಬುದಾಗಿ ಸಜ್ಜನರು ಹೇಳುತ್ತಾರೆ.

❋ ❋ ❋

2) ಕಾಷ್ಠಾದಗ್ನಿ ರ್ಜಾತಯತೇ ಮಥ್ಯಮಾನಾತ್
ಭೂಮಿಸ್ತೋಯಂ ಖನ್ಯಮಾನಾದದಾತಿ ।
ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ
ಮಾರ್ಗಾರಬ್ಧಾಃ ಸರ್ವಯತ್ನಾಃ ಫಲಂತಿ ॥

ಘರ್ಷಣೆಗೊಳಗಾದ ಬನ್ನಿಯ ಮರದ ಟ್ಟಿಗೆಯಿಂದ ಬೆಂಕಿಯು ಹುಟ್ಟುತ್ತದೆ. ಅಗೆಯಲ್ಪಟ್ಟ ಭೂಮಿಯು ನೀರನ್ನು ಕೊಡುತ್ತದೆ. ಉತ್ಸಾಹ ಶಾಲಿಯಾದ ಮನುಷ್ಯನಿಗೆ ಅಸಾಧ್ಯವೆಂಬುದೇ ಇಲ್ಲ. ಸರಿಯಾದ ಮಾರ್ಗದಿಂದ ಆರಂಭಿಸಲ್ಪಟ್ಟ ಎಲ್ಲ ಪ್ರಯತ್ನಗಳೂ ಫಲ ಕೊಡುತ್ತವೆ.

❋ ❋ ❋

3) ರೂಪ ಯೌವನ ಸಂಪನ್ನಾ ವಿಶಾಲ ಕುಲ ಸಂಭವಾಃ ।
ವಿದ್ಯಾಹೀನಾ ನಶೋಭಂತೇ ನಿರ್ಗಂಧಾ ಇವಕಿಂಶುಕಾಃ ॥

ರೂಪ ಮತ್ತು ಯೌವನದಿಂದ ಕೂಡಿಯೂ ಒಳ್ಳೆಯ ಕುಲದಲ್ಲಿ ಹುಟ್ಟಿಯೂ ವಿದ್ಯೆಯಿಲ್ಲದವರು ವಾಸನೆಯಿಲ್ಲದ ಮುತ್ತುಗದ ಹೂಗಳಂತೆ ಶೋಭಿಸುವುದಿಲ್ಲ. —ಸುಭಾಷಿತ

## ಅಮೃತ ಬಿಂದು

ದಾರಿಯ ಪಥದಲ್ಲಿ ಎಡಕ್ಕೆ ನಡೆಯಬೇಕೆಂಬುದು ನಿಯಮ ಇದೊಂದು ವ್ಯವಸ್ಥೆ. ಈ ವ್ಯವಸ್ಥೆಯನ್ನು ಮೀರಿ ನಡೆದರೆ ಅನರ್ಥ ಪರಂಪರೆಗೆ ದಾರಿ ಮಾಡಿಕೊಟ್ಟಂತೆಯೇ. ಇದರಂತೆ ಮಾನವನು ಜೀವನ ಪಥದಲ್ಲಿ ಸುಗಮವಾಗಿ ಮುನ್ನಡೆಯಬೇಕಾದರೆ ಧರ್ಮ ಎನ್ನುವ ವ್ಯವಸ್ಥೆಯನ್ನು ಒಪ್ಪಿಕೊಳ್ಳ ಬೇಕಾಗುತ್ತದೆ. ಧರ್ಮದಿಂದ ನಡೆದರೆ ಆ ಸಮಾಜಕ್ಕೂ ವ್ಯಕ್ತಿಗೂ, ನಾಡಿಗೂ ಶ್ರೇಯಸ್ಸು ಕಟ್ಟಿಟ್ಟ ಬುತ್ತಿ. ಆದರೆ ಧರ್ಮ ಯಾವುದು ಎನ್ನುವ ನಿಜವಾದ ತಿಳುವಳಿಕೆ ಜನತೆಯಲ್ಲಿ ಗೋಚರವಿರಬೇಕಾದ ಅಂಶ.

ಧರ್ಮದ ಬಗ್ಗೆ ವಿಚಾರಮಾಡುವುದಾದರೆ, ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ ಧರ್ಮವೇ ಎಲ್ಲಕ್ಕೂ ಮೂಲವಾದುದು. ಮೋಕ್ಷದ ಮಾತಂತಿರಲಿ ಅರ್ಥ ಕಾಮಗಳು ಧರ್ಮಕ್ಕೆ ಅಧೀನವಾಗಿರಬೇಕೆಂಬುದೇ ನಮ್ಮವರ ಬೋಧನೆಯಾಗಿದೆ. ಧರ್ಮವನ್ನು ಮೀರಿದ ಅರ್ಥ ಕಾಮಗಳನ್ನು ತ್ಯಜಿಸಬೇಕು. "ಗುರುವಾದರೂ ಕಾಯಕದಿಂದಲೇ ಮುಕ್ತಿ, ಕಾಯಕ ರಹಿತವಾದ ಸಂಪತ್ತನ್ನು ನಮ್ಮ ಶರಣರು ತಿರಸ್ಕರಿಸುವುದನ್ನು ಕಾಣಬಹುದಾಗಿದೆ. ಕಾಯಕದಿಂದ ಬಂದು ಅರ್ಥ ಧರ್ಮಕ್ಕೆ ವಿರುದ್ಧವಾದುದಲ್ಲ. ಕಾಮವೂ ಅಷ್ಟೆ ಧರ್ಮಕ್ಕೆ ವಿರುದ್ಧವಲ್ಲದೆ ಅದು ಸುಖ ಕೊಡುವುದಾಗಿದ್ದರೆ ಅದು ಸ್ವಾಗತಾರ್ಹ. ಧರ್ಮವನ್ನು ಮೀರಿದ ಅರ್ಥ ಕಾಮಗಳು ಶಾಶ್ವತವಾದ ಸುಖ ಕೊಡಲಾರವು. ಅವು ಅನರ್ಥ ಪರಂಪರೆಗೆ ದಾರಿಮಾಡಿಕೊಡುತ್ತವೆ.

ಧರ್ಮವನ್ನು ಬಿಟ್ಟು ಅರ್ಥ ಕಾಮಗಳಲ್ಲಿ ತೊಡಗಿರುವುದು ವ್ಯಕ್ತಿಗಾಗಲಿ ನಾಡಿಗಾಗಲಿ ಸಮಾಜಕ್ಕಾಗಲಿ ಶ್ರೇಯಸ್ಕರವಾಗಲಾರದು. —ದುಂಬಿ

# ಕ್ಷೇತ್ರವಾರ್ತೆ

## ಹೃದಯಸಂಪತ್ತು

—ಕೆ. ಬಸವರಾಜು

" ಸ್ವಾಮಿ; ತಗೊಳ್ಳಿ ! ನನ್ದು ಅನ್ನೊಂದ್ರೂಪಾಯಿ, ಸ್ವಾಮಿ ಮಠಕ್ಕೆ "

ಹಣ ಹಿಡಿದ ಹಸ್ತ ಮುಂದೆ ಚಾಚಿತು. ಬೆಳಕು ಮಾಡಿ ನೋಡಿದಾಗ- ಅರೆ ಪ್ರಾಯದ ಹೆಂಗಸೊಬ್ಬರು ಊಟ ಮಾಡುತ್ತಿದ್ದ ಕೈಯನ್ನು ಹಿಂದಿಟ್ಟುಕೊಂಡು ಹಣದ ಕೈ ಮುಂದೆ ನೀಡಿ ನಿಂತಿರುವುದು ಕಂಡುಬಂತು.

"ಸ್ವಾಮಿ, ನಾನು ಬಡವೆ, ಕೂಲಿ ಮಾಡಿ ಬದ್ಕೋಳು. ನಾನ್ಮಾಡಿದ ಕೂಲೀಲಿ ವಟ್ಕೀ ಅಂತ ದಿನಾಲೂ ಹತ್ಪೈಸೆ ಮೀಸ್ಲು ತಗ್ದಿಡ್ತಿದ್ದೆ· ಅದ್ನ ತಗೊಂಡೋಗಿ ಕೊಟ್ಬರೋಕೂ ಕೈಲಿ ಕಾಸಿರ್ಲಿಲ್ಲ. ನೀವೇ ಬಂದುದ್ದು ಬಾಳಾ ಒಳ್ಳೇದಾಯ್ತು ತಗೊಳ್ಳಿ."

ಊಟ ಮಾಡುತ್ತಿದ್ದುದನ್ನು ಬಿಟ್ಟು ಬಂದು ಹಣ ನೀಡಿದರು ಆಕೆ. ಆಕೆಯ ಹಸ್ತಗುಣವೊ ಏನೋ, ಕೂಡಲೆ ಹತ್ತಾರು ಕೈಗಳು ಸ್ವಯಂ ಪ್ರೇರಿತವಾಗಿ ಮುಂದೆ ಬಂದು ಯಥಾಶಕ್ತಿಯಿಂದ ಭಕ್ತಿ ಭಾವವನ್ನು ಪ್ರಕಟಿಸಿದವು.

ಶ್ರೀಶ್ರೀಗಳವರ ಸುವರ್ಣ ಮಹೋತ್ಸವದ ಕಾಣಿಕೆ ಸಂಗ್ರಹಣೆಗೆಂದು ಹೋಗಿದ್ದೆವು. ಅದೊಂದು ಕೂಲಿಗಾರರ ಹಟ್ಟಿ. ಬಂದ ವಿಷಯವನ್ನು ಮನಮುಟ್ಟಿಸಿದೆವು. ಆಗ ಅವರು ಪ್ರಕಟಿಸಿದ ಭಕ್ತಿ ಭಾವ ಅನುಪಮ; ವ್ಯಕ್ತಪಡಿಸಿದ ಪ್ರತಿ ಕ್ರಿಯೆ ಉತ್ತಮೋತ್ತಮ; ನೀಡಿದ ಕಾಣಿಕೆ ಅಮೂಲ್ಯವಾಗಿತ್ತು.

ಈ ಒಂದು ತ್ಯಾಗಜೀವಿಗಳ ಹೃದಯ ಸಂಪತ್ತನ್ನು ಪೂಜ್ಯ ಪಾದರು ಪದೇ ಪದೇ ಅಪ್ಪಣೆ ಕೊಡಿಸುತ್ತಿರುತ್ತಾರೆ.

" ಮಿಂದು ಮಡಿಯುಟ್ಟು, ತಲೇ ಮೇಲೆ ಕುಂಬಳಕಾಯಿ ಹೊತ್ತುಕೊಂಡು, ಹೆಗಲಲ್ಲಿ ದವಸದ ಗಂಟನ್ನು ಹೇರಿಕೊಂಡು, ಬಗಲಲ್ಲಿ ಕಡ್ಡಿಕಾಳುಗಳ ಇರುಕು ಗಂಟನ್ನು ಇಟ್ಟುಕೊಂಡು ಕಾಲ್ನಡಿಗೆಯಲ್ಲಿ ಬಂದು ಮಠಕ್ಕೆ ಅರ್ಪಿಸಿ ಪ್ರಸಾದ ಸ್ವೀಕರಿಸಿ ಹೋಗುತ್ತಾರೆ, ನಮ್ಮ ಹಳ್ಳಿಯ ಮುಗ್ಧ ಬಂಧುಗಳು. ಅವರ ಹೃದಯ ಸಂಪತ್ತನ್ನು ಅರ್ಥಮಾಡಿಕೊಳ್ಳಬೇಕು. "

ಎಂತಹ ಅರ್ಥಗರ್ಭಿತ ಮಾತಿದು ! " ಅನ್ಯಾಯ ಮಾರ್ಗದಿಂದ ಸಂಪಾದಿಸಿ ಅಗ್ಗಳವಾಗಿ ಕೊಡುವುದಕ್ಕಿಂತಲೂ ಬೆವರು ಸುರಿಸಿ, ಕಾಯ ಕಷ್ಟಮಾಡಿ ಅರ್ಪಣಾ ಮನೋಭಾವದಿಂದ ದುಗ್ಗಾಣಿ ದಾನ ಮಾಡುವುದು ಶ್ರೇಷ್ಠವಾದುದು." ಸತ್ಯ ಶುದ್ಧ ಕಾಯಕದಿಂದ ಗಳಿಸಿದುದರಲ್ಲಿ ಯಥಾಶಕ್ತಿ ಪರಿಶುದ್ಧ ಹೃದಯದಿಂದ ಸಮರ್ಪಿಸುವುದಕ್ಕಿಂತ ಬೆಲೆ ಇನ್ನಾವುದಕ್ಕಿದೆ?

"**ಅಡವೆ ಕೊಡುವ ರೂಢಿಯೊಳಗುತ್ತಮ**"ರಾದ ಇವರಿಗಿಂತ ಮಿಗಿಲಿನ್ನಾರು ?





# ಮರ್ತ್ಯಲೋಕದ ಮಹಾಬೆಳಗು : ಉದ್ದಾನಯತೀಶ

—ಚನ್ನಪ್ಪ ಎರೇಸೀಮೆ

ಬಾಲ್ಯದಲ್ಲಿ ಲಕ್ಕೂರಿನ ರುದ್ರಪ್ಪ ಸಾಮಾನ್ಯ ಬಾಲಕನಂತೇನೂ ಇರಲಿಲ್ಲ. ಹುಟ್ಟುತ್ತಲೇ ಅವನು ಯೌಗಿಕ ಪುರುಷನಂತೆ ಇದ್ದ. ಕರ್ಣನ ಸಹಜ ಕವಚ ಕುಂಡಲಗಳಂತೆ ಅವನ ಮೈ ಮನಸ್ಸಿಗೆ ಯೌಗಿಕ ಶಕ್ತಿ ಅಂಟಿಕೊಂಡು ಬಂದಿತ್ತು. ಅಂತೆಯೇ ಅವನ ಅನೇಕ ಅಲೌಕಿಕ ನಡೆನುಡಿಗಳು ಲೋಕದ ಜನದಿಂದ ಅವನನ್ನು ಬೇರ್ಪಡಿಸಿದ್ದವು. ಕೆಲವರು ಹುಟ್ಟುತ್ತಲೇ ದೊಡ್ಡವರಾಗಿ ಹುಟ್ಟುತ್ತಾರೆ; ಕೆಲವರು ಹುಟ್ಟಿದಮೇಲೆ ದೊಡ್ಡವರಾಗುತ್ತಾರೆಂದು ಈ ಪೂರ್ವದಲ್ಲಿ ಹೇಳಿದುದು ಇದೇ ಉದ್ದೇಶದಿಂದ. ಶಂಕರಾಚಾರ್ಯರು ಹುಟ್ಟುತ್ತಲೇ ದೊಡ್ಡವರಾಗಿ ಹುಟ್ಟಿದರು. ಇಲ್ಲದಿದ್ದರೆ ಎಂಟನೆಯ ವಯಸ್ಸಿನಲ್ಲಿಯೇ ಸಕಲ ವೇದಶಾಸ್ತ್ರದಕ್ರಮ ಹೇಗೆ ಅವರಿಗೆ ವಶವರ್ತಿಯಾಗುತ್ತಿತ್ತು ? 32 ವರ್ಷ ವಯಸ್ಸಿನ ಹೊತ್ತಿಗೆ ಅವರು ಸಾಧಿಸಿದ್ದು ಅಗಣಿತ. ಇಂಥ ಅದ್ಭುತ ಚೇತಸ್ಸುಗಳ ವಿಚಾರದಲ್ಲಿ ಸಾಮಾನ್ಯ ಲೋಕಾಲೌಕಿಕ ರೀತ್ಯಾ ಯೋಚಿಸುವವರ ಯೋಚನೆಗಳು ತಲೆಕೆಳಗಾಗುತ್ತವೆ. ಕುರಿ ಮೇಕೆಗಳನ್ನು ಕಾಯುವ ಕಾಯಕದ ಮರೆಯಲ್ಲಿ ಅಗಾಧ ಶಕ್ತಿಯ ಉದ್ದಾನಪ್ಪನ ಅಲೌಕಿಕ ನಡೆನುಡಿಗಳು ಲೋಕಕ್ಕೆ ತಿಳಿಯುವುದಾದರೂ ಹೇಗೆ ? ಇಂಥವರನ್ನು ಕಂಡು ಲೋಕ ಗುರುತಿಸುವುದು ಕಷ್ಟವೆಂಬ ಮಾತು ಒತ್ತಟ್ಟಿಗಿರಲಿ. ಇವರನ್ನು ಹುಚ್ಚರೆಂದೇ ಕರೆಯುವುದೂ ಉಂಟು.[9] ಇವರನ್ನು ಮಹಾಪುರುಷರೆಂದು ಲೋಕ ಸ್ವೀಕರಿಸುವುದು ಒಂದು ಸನ್ಮುಹೂರ್ತದ ಮಹಾಘಟನೆ ಒದಗಿದಾಗ ಮಾತ್ರ. ರುದ್ರಪ್ಪ ಹರದನಹಳ್ಳಿ ಪೀಠಾಚಾರ್ಯರ ಪರಂಪರೆಯ ಅಂತಸ್ಸತ್ವವನ್ನು 19 ನೆಯ ಶತಮಾನದಲ್ಲಿಯೂ ಪಡೆದು ಮೂಡಿಬಂದ ಒಂದು ಶಿವಕಳೆಯ ಮಿಂಚು. ಅದು ಒಂದು ಸನ್ಮುಹೂರ್ತದ ಎದಿರು ನೋಡುತ್ತಾ ಸಿದ್ಧಪುರುಷರ ತಪೋಭೂಮಿಯ ಮರೆಯಲ್ಲಿ ಕುರಿ ಮೇಕೆಗಳನ್ನು ಕಾಯುವ ಒಂದು ಲೀಲಾವಿನೋದದಲ್ಲಿ ಕಾಲಯಾಪನೆ ಮಾಡುತ್ತಿತ್ತೆಂದೂ ಹರದನಹಳ್ಳಿಯ ಪೀಠಾಚಾರ್ಯರುಗಳ ತಪೋಭೂಮಿಯ ಒಡೆತನದ ಸಿದ್ಧತೆಯ ಸಾಧನೆಯಲ್ಲಿ ಕಾಲಯಾಪನೆ ಮಾಡುತ್ತಿತ್ತೆಂದೂ ಹೇಳಬಹುದಾಗಿದೆ.

### ಜನ್ಮದುರಾಸೆಗಳೆದು ಹೊರಹೊರಟ ವಿಪುಲ ವೈರಾಗ್ಯ ನಿಧಿ :

ಕುರಿ ಮೇಕೆಗಳ ಪಾಲನೆಯಲ್ಲಿ ನಿರತನಾಗಿದ್ದ ರುದ್ರಪ್ಪನ ಮೇಲೆ ಅಗಾಧ ಪರಿಣಾಮವನ್ನು (ನಿಜಗಲ್ಲು ಬೆಟ್ಟ) ಉಂಟುಮಾಡಿತ್ತು. ಆ ಬೆಟ್ಟದಲ್ಲಿರುವ ಹೆಬ್ಬಂಡೆಗಳಲ್ಲಿ ಪ್ರಕೃತಿ ನಿರ್ಮಿತ ಗುಹೆಗಳನ್ನೆಲ್ಲ ರುದ್ರಪ್ಪ ಪರಿ

---

9 ಸ್ವಾಮಿ ವಿವೇಕಾನಂದರು ಕಲ್ಕತ್ತ ನಗರದಿಂದ ಬೀದಿ ಬೀದಿಗಳಲ್ಲಿ ಚಿಕ್ಕಪುಟ್ಟ ನೌಕರಿಗಾಗಿ ಅಲೆಯುತ್ತಿದ್ದಾಗ ದೇವರು, ದೈವಗಳ ವಿಚಾರದಲ್ಲಿ ವಿಚಿತ್ರ ರೀತಿಯ ವಿತಂಡ ವಾದ ಮಾಡುತ್ತಿದ್ದಾಗ, ತನ್ನ ತಂದೆ ತನಗಾಗಿ ಏನೇನೂ ಮಾಡಿಲ್ಲವೆಂದೂ ಅವನೊಡನೆ ಜಗಳಕ್ಕೆ ನಿಂತಾಗ ಅವನ ಅಂತರಂಗದ ಅದ್ಭುತ ಶಕ್ತಿಯು ನಿಲವನ್ನರಿಯದೆ ಅವನನ್ನು ಹುಚ್ಚನೆನ್ನುವವರು ಇದ್ದರೂ ಅವನು ಜಗತ್ಪ್ರಸಿದ್ಧ ತತ್ವಜ್ಞಾನಿಯಾಗಿ ಜಗತ್ತನ್ನೇ ಬೆರೆಗುಗೊಳಿಸಬಲ್ಲ ಮಹಾ ಪುರುಷನಾಗುವನೆಂದು ಆಗ ಯಾರೂ ಗುರುತಿಸಲೇ ಇಲ್ಲ. ಅವನು ಮಹಾಪುರುಷನಾಗಿ ಗೋಚರವಾದದ್ದು ಒಂದು ಸನ್ಮುಹೂರ್ತ ಒದಗಿದಾಗ ಮಾತ್ರ.

ಚಯ ಮಾಡಿಕೊಂಡಿದ್ದ. ಕೆಲವು ಗುಹೆಗಳಲ್ಲಿ ಪ್ರಾಚೀನರಿಂದ ಪ್ರತಿಷ್ಠಿಸಲ್ಪಟ್ಟ ಶಿವಲಿಂಗಗಳಮುಂದೆ ತಲ್ಲೀನತೆಯಿಂದ ಗಂಟೆಗಟ್ಟಲೆ ಕುಳಿತು ಧ್ಯಾನಮಗ್ನನಾಗುತ್ತಿದ್ದ. ಅಲ್ಲಿಯೇ ಒಂದು ಪಾರ್ಶ್ವದಲ್ಲಿದ್ದ ಉದ್ದಾನ ವೀರಭದ್ರನ ದರ್ಶನಕ್ಕೆ ಆಗಾಗ ಹೋಗಿ ಅಲ್ಲಿ ಮೈಮರೆತು ಕುಳ್ಳಿರುತ್ತಿದ್ದ. ಉದ್ದಾನ ವೀರಭದ್ರ ದೇವಾಲಯ ಮತ್ತು ವೀರಭದ್ರ ಮೂರ್ತಿ ಇವನ ಮನಸ್ಸಿನ ಮೇಲೆ ಅಗಾಧ ಪರಿಣಾಮ ಉಂಟುಮಾಡಿದ್ದವು. ಕಾರಣವೇನೆಂದರೆ ಪಟೇಲ್ ಗಟ್ಟಪ್ಪನವರು ತಮ್ಮ ಮನೆದೇವರಾದ ಈ ವೀರಭದ್ರನ ಪೂಜೆ ಪುನಸ್ಕಾರಗಳಿಗೆ ವಿಶೇಷ ದಿನಗಳಲ್ಲಿ ಮನೆಯ ಸಮಸ್ತ ಮಂಡಳಿಯೊಡನೆ ಬರುತ್ತಿದ್ದರು. ಬಾಲ್ಯದಿಂದ ರುದ್ರಪ್ಪ ಅನೇಕ ಸಲ ಈ ದೇವಾಲಯಕ್ಕೆ ಬಂದು ತಂದೆ ತಾಯಿಗಳ ಭಕ್ತಿ ಚೇತನದಲ್ಲಿ ಪಾಲ್ಗೊಂಡಿದ್ದ ಕಾರಣ ಹಸುಳೆತನದಿಂದಲೂ ಒಂದು ಅನಿರ್ವಚನೀಯ ಸಂಬಂಧದ ಬೆಸುಗೆ ವೀರಭದ್ರ ಮೂರ್ತಿ ರುದ್ರಪ್ಪನ ಮನಸ್ಸಿನೊಡನೆ ಬೆಸೆದಿತ್ತು. ಅಂತೆಯೇ ಉದ್ದಾನ ವೀರಭದ್ರನ ಗುಡಿಗೆ ಆಗಾಗ ರುದ್ರಪ್ಪ ಹೋಗಿ ಮೈಮರೆತು ಜ್ಞಾನದಲ್ಲಿ ಮಗ್ನನಾಗುತ್ತಿದ್ದ. ಒಮ್ಮೊಮ್ಮೆ ಸಿದ್ಧಗಿರಿಯ ನೆತ್ತಿಯನ್ನೇರಿ ಅತಿ ನಿಕಟದಲ್ಲಿಯೇ, ಸ್ಪಷ್ಟವಾಗಿ ಕಾಣುತ್ತಿದ್ದ ಶಿವಗಂಗಾ ಗಿರಿಯ ನೆತ್ತಿಯನ್ನು ಇನ್ನೊಮ್ಮೆ ರಾಮಗಿರಿ ( ರಾಮೇಶ್ವರ ಬೆಟ್ಟ ) ಶಿವಗಿರಿ ಅಥವಾ ಸಿದ್ಧಗಂಗಾ ಬೆಟ್ಟದ ನೆತ್ತಿಯನ್ನು ಎವೆಯಿಕ್ಕದೆ ನೋಡುತ್ತಿದ್ದ. ಆಕಾಶದಲ್ಲಿ ತೂರಿ ಹೋಗುತ್ತಿದ್ದ ಮೋಡಗಳ ಬೆನ್ನೇರಿ ಆ ಗುಡ್ಡದ ನೆತ್ತಿಗಳ ಮೇಲೆ ಇಳಿದು ಕ್ರೀಡಿಸಿದಂತೆ ಸ್ವಭಾವ ಕ್ರೀಡೆಗಳಲ್ಲಿಯೂ ಮುಳುಗಿರುತ್ತಿದ್ದ. ಬಿಡುವು ಆದಾಗಲೆಲ್ಲ ಒಬ್ಬನೇ ಅಲ್ಲಿಯವರೆಗೂ ಹೋಗಿ ಸುತ್ತಾಡಿ ಬರುತ್ತಿದುದೂ ಉಂಟು. ಒಮ್ಮೊಮ್ಮೆ ಸಿದ್ಧಗಂಗಾ ಬೆಟ್ಟದ ಕಡೆಯಿಂದ ಯಾವುದೋ ಶಕ್ತಿ ಕೈಬೀಸಿ ತನ್ನನ್ನು ಕರೆಯುತ್ತಿದ್ದಂತೆಯೂ ಹಗಲುಗನಸು ಕಾಣುತ್ತಿದ್ದ. ಒಮ್ಮೆ ಸಿದ್ಧನ ಬೆಟ್ಟದಲ್ಲಿ ತನ್ನ ನಿತ್ಯ ಕಾಯಕದಲ್ಲಿ ಮಗ್ನನಾಗಿರುವಾಗ ಓರ್ವ ದಿವ್ಯಪುರುಷನ ದರ್ಶನ ರುದ್ರಪ್ಪನಿಗೆ ಆಯಿತು. ಆತನ ಸಹವಾಸದಲ್ಲಿ ರುದ್ರಪ್ಪ ಅನೇಕ ದಿನಗಳು ಅಲೆದಾಡಿದ. ಭೀಕರ ಗುಹೆಗಳಲ್ಲಿ ಹಗಲು ರಾತ್ರಿಯೆನ್ನದೆ ಕಾಲಕಳೆಯ ತೊಡಗಿದ. ಈತನ ಸಂಸರ್ಗದ ಫಲವಾಗಿ ರುದ್ರಪ್ಪ ಮಂತ್ರ ತಂತ್ರ ಭೂತಬಾಧಾನಿವಾರಣಾದಿ ಅನೇಕ ವಿದ್ಯೆಗಳನ್ನು ಕಲಿತುಕೊಂಡುಬಿಟ್ಟ. ಈಗ ರುದ್ರಪ್ಪನ ಚರ್ಯೆಯು ಒಂದು ಬಗೆಯಾಯಿತು. ಸಿದ್ಧಪುರುಷನಿಗೂ ರುದ್ರಪ್ಪನಿಗೂ ಸಂಬಂಧ ತಪ್ಪಿಹೋಯಿತು. ಆಮೇಲೆ ರುದ್ರಪ್ಪ ತಾನು ಕಲಿತ ಈ ವಿದ್ಯೆಗಳನ್ನೆಲ್ಲಾ ಪ್ರಯೋಗಿಸತೊಡಗಿದ. ಇವನ್ನು ಪ್ರಯೋಗಿಸಬೇಕೆ? ಬೇಡವೇ? ಎಂಬುದೊಂದು ಬೇರೆ ಪ್ರಶ್ನೆ? ಆದರೆ ರುದ್ರಪ್ಪನಿಗೆ ಮೊದಲು ಮೊದಲು ಈ ಪ್ರಯೋಗದಲ್ಲಿ ಒಂದು ಮೋಜೆನಿಸಿದ್ದಂತೂ ನಿಜ. ನಂತರ ಶಿವಯೋಗದ ಮುಂದೆ ಇವೆಲ್ಲ ಅಲ್ಲವೆಂಬ ತಿಳುವಳಿಕೆ ಬರುವವರೆಗೆ ಆಗಾಗ ಈ ಪ್ರಯೋಗಗಳನ್ನು ಮಾಡುತ್ತಿದ್ದನೆಂದೂ ಆನೇಕರ ಅಭಿಪ್ರಾಯ. ಉದ್ದಾನಪ್ಪ ಮೇಕೆಗಳನ್ನು ಕಾಯುತ್ತಿದ್ದಾಗ ಇವನೊಡನೆ ಧನ ಕಾಯುವ ಸ್ನೇಹಿತರೂ ಕೆಲವರಾದರು ಅವರಲ್ಲಿ ಮುಖ್ಯವಾಗಿ ನಿಜಗಲ್ಲಿನ ಚನ್ನಮುತ್ತಯ್ಯ, ಊರಗೊಲ್ಲರ ನಂಜಪ್ಪ, ಇವರು ಬಹಳ ಮುಖ್ಯರಾದವರು. ಇವರು ಯಾವಾಗಲೂ ರುದ್ರಪ್ಪನನ್ನು ಬಿಟ್ಟಿರದೆ ಅವನು ಓದುವುದನ್ನು ಕೇಳುತ್ತಾ ಕುಳ್ಳಿರುತ್ತಿದ್ದರು. ದನ ಮೇಕೆಗಳೆಲ್ಲ ಇವರ ಸುತ್ತಲೂ ನಿಲ್ಲುತ್ತಿದ್ದ ದಿನಗಳೆಷ್ಟೋ. ಆ ಬೆಟ್ಟದಲ್ಲಿನ ಕ್ರೂರ ಮೃಗಳಿಂದ ಇವರ ತಂಡದಲ್ಲಿನ ಒಂದು ಪಶುವಿಗೂ ಎಂದೂ ಬಾಧೆ ಬರಲಿಲ್ಲವಂತೆ. ಎಷ್ಟೋ ಸಮಯದಲ್ಲಿ ದನಮೇಕೆಗಳು ಮೇಯುವುದನ್ನು ಬಿಟ್ಟು ರುದ್ರಪ್ಪನ ಸುತ್ತ ಮೆಲಕು ಹಾಕುತ್ತ ಮಲಗುತ್ತಿದ್ದುದನ್ನು ಎಲ್ಲರೂ ನೋಡಿ ಈ ರುದ್ರಪ್ಪ ದನಗಳಿಗೆಲ್ಲ ಯಾವುದೋ ಮಂಕುಬೂದಿ ಚೆಲ್ಲಿದ್ದಾನೆಂದುಕೊಂಡರಂತೆ. ದನಕಾಯುವ ಸ್ನೇಹಿತರಾದ ಚೆನ್ನಮುತ್ತಯ್ಯ, ನಂಜಪ್ಪ ಇವರು ರುದ್ರಪ್ಪನ ಶಿಷ್ಯರಂತೆ ವರ್ತಿಸುತ್ತಾ ಕಾಡಿನಲ್ಲಿನ ಗೇರು, ಮಾವು, ಕವಳಿ, ನೇರಳೆಹಣ್ಣುಗಳನ್ನು ಸಂಗ್ರಹಿಸಿ ತಂದು ರುದ್ರಪ್ಪನ ಮುಂದೆ ಗುಡ್ಡೆ ಹಾಕುತ್ತಿದ್ದರಂತೆ. ಅವರ ದನಗಳ ರಕ್ಷಣೆಯ ಭಾರ ರುದ್ರಪ್ಪನದಾಗಿರುತ್ತಿತ್ತು. ಫಲಗಳನ್ನು ರುದ್ರಪ್ಪ ಸ್ನಾನ ಪೂಜೆಯನ್ನು ಮುಗಿಸಿ ತಿನ್ನುತ್ತಿದ್ದನಂತೆ.

ಒಂದು ದಿನ ಸಾಯಂಕಾಲದ ಸಮಯ. ಮೇಕೆಗಳನ್ನು ಮೇಯಬಿಟ್ಟು ರುದ್ರಪ್ಪ ಒಂದು ಬಂಡೆಯ ಮೇಲೆ ಕುಳಿತ್ತಿದ್ದ. ಅಷ್ಟರಲ್ಲಿ ಒಂದು ತೋಳವು ಮೇಕೆಗಳನ್ನು ಅಟ್ಟಿಸಿಕೊಂಡು ಬಂತು. ಮೇಕೆಗಳು ಓಡಿ ಓಡಿ ಬಂದವು. ರುದ್ರಪ್ಪ ತೋಳವನ್ನು ಕಂಡು ಭಯಭೀತಿಯಿಂದ ಓಡಿಬಂದ ಮೇಕೆಗಳನ್ನು ನೋಡಿದನು. ಕೆಲವು ಮೇಕೆಗಳು ರುದ್ರಪ್ಪನ ಸುತ್ತಮುತ್ತ ಕೂಗಾಡುತ್ತಾ ನಿಂತವು. ನಾಲ್ಕು ಮೇಕೆಗಳು ಮಾತ್ರ ಕೆಸರಿನಲ್ಲಿ ಸಿಕ್ಕಿ ಹಾಕಿಕೊಂಡವು. ತೋಳ ಅವುಗಳತ್ತ ಹೋಗಿ ಬಾಯ್ತೆರೆಯಿತು. ಆದರೆ ತೋಳ ಒಂದು ಮೇಕೆಯನ್ನು ಮುಟ್ಟಲಾಗಲಿಲ್ಲ. ಹಾಗೆಯೇ ಬಾಯ್ತೆರೆದೇ ನಿಂತು ಬಿಟ್ಟಿತು. ರಾತ್ರಿ ಹನ್ನೆರಡು ಗಂಟೆಯಾದರೂ ಹಾಗೇ ನಿಂತಿತ್ತು. ಮೇಕೆಗಳೂ ತೋಳದಿಂದ ಮಾರುದ್ದ ದೂರದಲ್ಲಿ ಕೆಸರಿನಲ್ಲಿ ಹಾಗೇ ನಿಂತುಕೊಂಡಿದ್ದವು. ಉಳಿದ ಮೇಕೆಗಳೆಲ್ಲ ರುದ್ರಪ್ಪನ ಸುತ್ತಮುತ್ತ ಮಲಗಿ ಮೆಲಕು ಹಾಕುತ್ತಿದ್ದವು. ರಾತ್ರಿ 12 ಗಂಟೆಯಾದರೂ ಮೇಕೆಗಳೂ ರುದ್ರಪ್ಪನೂ ಮನೆಗೆ ಬಾರದಿರುವುದರಿಂದ ತಾಯಿ ತಂದೆಗಳು ನಾಲ್ಕಾರು ಜನರನ್ನು ಹುಡುಕಲು ಕಳಿಸಿದರು. ದೀಪದೊಡನೆ ಮಧ್ಯರಾತ್ರಿ ಸುಮಾರಿಗೆ ಅವರೆಲ್ಲ ಬಂಡೆಯ ಮೇಲೆ ತಾನೇ ತಾನಾಗೀ ಕುಳಿತ ರುದ್ರಪ್ಪನನ್ನು, ಸುತ್ತ ಮುತ್ತ ನಿಶ್ಚಿಂತೆಯಿಂದ ಮಲಗಿದ್ದ ಮೇಕೆಗಳನ್ನು ತೋಳವನ್ನು ಕಂಡು ಅವರೆಲ್ಲ ಅವಾಕ್ಕಾದರು. ತೋಳ ಮಾತ್ರ ತೆರದ ಬಾಯಲ್ಲಿ ಹಾಗೇ ನಿಂತಿತ್ತು. ಊರಿಂದ ಬಂದವರು ಕೆಸರಿನಲ್ಲಿದ್ದ ಮೇಕೆಗಳೊಡನೆ ಮನೆಗೆ ರುದ್ರಪ್ಪನನ್ನು ಕರೆತಂದರು. ತೋಳವನ್ನು ರುದ್ರಪ್ಪ ಹೊಡೆಯಗೊಡಲಿಲ್ಲ. ರುದ್ರಪ್ಪ ತೋಳಕ್ಕೆ ಮತ್ತಾವ ಮಂತ್ರ ಹಾಕಿದನೋ ಶಿವನೇ ಬಲ್ಲ. ಆಮೇಲೆ ತೋಳ ಬಾಯಿ ಮುಚ್ಚಿಕೊಂಡು ಓಡಿಹೋಯಿತು. ಈ ಘಟನೆ ನಡೆದುದು ರುದ್ರಪ್ಪ ಸುಮಾರು 15 ವರ್ಷದವನಿರುವಾಗ.

ಮನೆಗೆ ಬಂದೊಡನೆ ರುದ್ರಪ್ಪನ ತಂದೆ ಅಣ್ಣ ತಮ್ಮಂದಿರೆಲ್ಲ ಮನಸ್ಸಿಚ್ಛೆ ಮಾತಾಡ ತೊಡಗಿದರು. ರುದ್ರಪ್ಪ ಅವನ್ನೆಲ್ಲ ತನ್ನ ಮೌನ ಮುದ್ರೆಯ ಮಹಾಸ್ತ್ರದಿಂದ ಜಯಿಸಿಕೊಂಡ. ಅಣ್ಣಂದಿರಿಂದ ಒಂದೆರಡು ಏಟುಗಳನ್ನೂ ತಿಂದ. ಆದರೆ ಅವೆಲ್ಲವನ್ನೂ ರುದ್ರಪ್ಪ ತುಟಿ ಪಿಟಿಕ್ ಎನ್ನದೆ ಸಹಿಸಿಕೊಂಡು ಸುಮ್ಮನಾದ. ಈ ಘಟನೆ ನಡೆದ ಕೆಲ ದಿನಗಳಲ್ಲಿ ಇನ್ನೊಂದು ಘಟನೆ ನಡೆಯಿತು. ಅಣ್ಣನಾದ ಗುಂಡಪ್ಪ ಗೊಬ್ಬರವನ್ನು ಹೊಲಕ್ಕೆ ಹೇರಲು ಬಂಡಿ ಕಟ್ಟಿದ್ದ. ರುದ್ರಪ್ಪನೂ ಅಣ್ಣನ ಈ ಕಾರ್ಯದಲ್ಲಿ ನೆರವಾಗಲೆಂದು ಬಂದಿದ್ದ. ಗಾಡಿಗೆ ಎತ್ತನ್ನು ಹೂಡುವಾಗ ಜತ್ತಿಗೆಯನ್ನು ಹೊರಭಾಗದಿಂದ ಹಾಕಲು ರುದ್ರಪ್ಪ ತೊಡಗಿದಾಗ ಕೋಪಗೊಂಡ ಗುಂಡಪ್ಪ ಇಷ್ಟು ದಿನ ವ್ಯವಸಾಯ ಮಾಡಿದ ನಿನಗೆ ಎತ್ತು ಹೂಡಲಿಕ್ಕೆ ಇನ್ನೂ ಬರಲಿಲ್ಲವೇ ಮೂರ್ಖಾ ಎಂದು ಫಡೀರನೆ ಕಪೋಲಕ್ಕೆ ಹೊಡೆದು ಬಿಟ್ಟ. ಹೊಡೆತದಿಂದ ರುದ್ರಪ್ಪನಿಗೆ ತಲೆ ಗಿರ್ರೆಂದಿತು. ಕಣ್ಣಲ್ಲಿ ಕತ್ತಲೆ ಗೂಡಿದಂತಾಯಿತು. ಐದು ಬೆರಳುಗಳೂ ಕಪೋಲದ ಮೇಲೆ ಬಾಸುಂಡೆ ಸರಿಯಾಗಿ ಮೂಡಿದವು. ಈಗಲೂ ರುದ್ರಪ್ಪ ಏನೂ ಮಾತನಾಡದೆ ಸುಮ್ಮನೆ ಸಹಿಸಿಕೊಂಡೇ ತನ್ನ ಕರ್ತವ್ಯ ನಿರ್ವಹಿಸಿದ. ಮಗದೊಂದು ಮೂರನೆಯ ಪ್ರಸಂಗ ರುದ್ರಪ್ಪನ ಮನಸ್ಸಿನ ಮೇಲೆ ಅಗಾಧ ಪರಿಣಾಮವುಂಟು ಮಾಡುವ ಸನ್ನಿವೇಶವೊಂದು ಒದಗಿತು.

ರುದ್ರಪ್ಪ ದನ ಮೇಸುವುದಕ್ಕೆ ಹೋಗಲಿ ಎಲ್ಲಿಗೆ ಹೋಗಲಿ ತನ್ನ ಒಂದು **ಜೋಳಿಗೆ** ಸಂಗಾತಿಯಾಗಿ ಹೆಗಲಿನಲ್ಲಿ ನೇತಾಡುತ್ತ ಇದ್ದೇ ಇರುತ್ತಿತ್ತು. ಆ ಜೋಳಿಗೆಯಲ್ಲಿ ಕರ್ಪೂರ, ಊದುಬತ್ತಿ, ಭಸ್ಮ, ಸ್ವಲ್ಪಪತ್ರೆ ಒಂದು ಸಕ್ಕರೆಯ ಪೊಟ್ಟಣ ಇರಲೇಬೇಕು ಇರುವೆಯ ಸಾಲು ಕಂಡೆಲ್ಲೆಲ್ಲ ಪೊಟ್ಟಣ ಬಿಚ್ಚಿ ಸಕ್ಕರೆ ಹಾಕಲೇಬೇಕು. ಈ ಪರಿಪಾಠ ಏಳೆಂಟು ವರ್ಷದ ಹುಡುಗನಿಂದಲೂ ರುದ್ರಪ್ಪನ ಒಂದು ಅಭ್ಯಾಸವಾಗಿ ಬಂದಿತ್ತು. ಸಕ್ಕರೆ ಮತ್ತು ಕರ್ಪೂರಕ್ಕಾಗಿ ಆಗಾಗ ಒಂದೊಂದು ಮೇಕೆಯನ್ನು ಮಾರಿ ಈ ಕಾರ್ಯಕ್ಕಾಗಿ ಹಣವೊದಗಿಸಿಕೊಳ್ಳುತ್ತಿದ್ದ. ಒಮ್ಮೆ ಈ ಕಾರ್ಯಕ್ಕಾಗಿ ಹಣದ ಅಭಾವ ಬಹಳವಾದಾಗ ಒಂದು ದೊಡ್ಡ ಮೇಕೆಯನ್ನೇ ಎರಡು ರೂಪಾಯಿಗಳಿಗೆ ಮಾರಿಬಿಟ್ಟ.[10]

---

10 ಎರಡು ರೂಪಾಯಿಗಳಿಗೆ 1875 ರ ಸುಮಾರಿಗೆ ಮಾರಿದುದರಲ್ಲಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಆಗ ಒಂದು ರೂಪಾಯಿಗೊಂದರಂತೆ ಮೇಕೆಗಳು ಮಾರಾಟವಾಗುತ್ತಿದ್ದ ಕಾಲ. ಎರಡು ರೂಪಾಯಿ ಒಂದು ಮೇಕೆಯ ಬೆಲೆ ಬಹಳ ಹೆಚ್ಚು. 5-6 ರೂಪಾಯಿಗಳಿಗೆ ಒಂದೊಂದು ಹಸು ಬರುತ್ತಿದ್ದ ಆ ಕಾಲದಲ್ಲಿ ಮೇಕೆಯ ಬೆಲೆ ಒಂದೂಕಾಲು, ಒಂದೂವರೆಯಾದರೆ ಬಹಳ ಹೆಚ್ಚು. ಎರಡುರೂಪಾಯಿಯ ಮೇಕೆಯೊಂದರೆ ಸುಮಾರು ಒಂದು ತಂಬಿಗೆ ಹಾಲುಕೊಡುವ ಮೇಕೆಯೆಂದೇ ತಿಳಿಯಬೇಕು. ಒಂದೊಂದು ತಂಬಿಗೆ ಹಾಲುಕೊಡುವ ಮೇಕೆಗಳನ್ನು ಮೊನ್ನೆ ಮೊನ್ನೆಯವರೆವಿಗೂ ನೋಡುತ್ತಿದ್ದೆವು. ಈಗ ಅಂಥ ತಳಿಯನ್ನೇ ಮನುಷ್ಯ ನಶಿಸುವಂತೆ ಮಾಡಿದ್ದಾನೆ.

ಒಳ್ಳೆಯ ಹಾಲಿನ ತಳಿಯ ಒಳ್ಳೆಯ ಮೇಕೆಯನ್ನು ಮಾರಾಟ ಮಾಡಿದ ರುದ್ರಪ್ಪನ ಬಗೆಗೆ ಮನೆಯವರಿಗೆಲ್ಲ ಆಕ್ರೋಶ ಅಧಿಕವಾಗಿ ಹೋಯಿತು. ಆದರೆ ರುದ್ರಪ್ಪನಿಗೆ ಆ ಎರಡು ರೂಪಾಯಿ ಅವನ ಆರು ತಿಂಗಳವರೆಗಿನ ಸಕ್ಕರೆ ಕರ್ಪೂರಗಳ ಅಭಾವವನ್ನು ಹೋಗಲಾಡಿಸುವಷ್ಟು ಮಟ್ಟಿನ ನೆಮ್ಮದಿ ತಂದುಕೊಟ್ಟಿತ್ತು. ಮೇಕೆಯನ್ನು ಮಾರಿಕೊಂಡು ಬಂದ ದಿನ ರಾತ್ರಿ ಈ ಸುದ್ದಿಯನ್ನು ತಿಳಿದ ಐದು ಜನ ಅಣ್ಣಂದಿರೂ, ತಂದೆಯೂ ಆಳಿಗೊಂದು ಬೈದು ನಾಲ್ಕಾರು ಪೆಟ್ಟುಗಳನ್ನು ಕೊಟ್ಟುಬಿಟ್ಟರು. ಮನೆಯವರ ಭರ್ತ್ಸನೆಯ ಈ ಮೂರು ಪ್ರಸಂಗಗಳೂ ರುದ್ರಪ್ಪನಲ್ಲಿ ಒಂದು ಬಗೆಯ ಪ್ರಬಲ ವೈರಾಗ್ಯ ಭಾವ ಬಲಿಯಲು ಅರಿವು ಮಾಡಿಕೊಟ್ಟವು. ಅಂದು ರಾತ್ರಿ ರುದ್ರಪ್ಪನಿಗೆ ನಿದ್ರೆ ಬರಲಿಲ್ಲ. ದುಃಖವೂ ಆಗಲಿಲ್ಲ, ರಾತ್ರಿಯೆಲ್ಲಾ ಆಪ್ತರು, ಮಿತ್ರರು, ತಾಯ್ತಂದೆಗಳು ಮನೆ ಮಠ ಇವುಗಳ ಮೇಲೆ ಅಲ್ಪ ಸ್ವಲ್ಪವಿದ್ದ ಅವನ ಮಮಕಾರ ಭಾವ ರಾತ್ರಿಯ ಯೋಚನಾಗ್ನಿಯಲ್ಲಿ ದಗ್ಧವಾಗಿ ಹೋಯಿತು. ಬೆಳಕು ಹರಿಯುವುದರೊಳಗಾಗಿ ಈ ನೆಲವ ಬಿಟ್ಟೋಡುವೆನೆಂಬ ಒಂದು ಬಗೆಯ ಕೆಚ್ಚು ಅವನಲ್ಲಿ ಅಂಕುರಿಸಿತು. ಎಲ್ಲಿಗೆ ಹೋಗಬೇಕು ? ಏನು ಮಾಡಬೇಕು ಎಂಬುದನ್ನೆಲ್ಲ ನಿಶ್ಚಯಿಸಿಕೊಂಡು ಬಿಟ್ಟ.

ಇತ್ತ ಗಟ್ಟಪ್ಪ ಮತ್ತು ಉಳಿದ ಗಂಡು ಮಕ್ಕಳು ರುದ್ರಪ್ಪನ ಬಗೆಗೆ ನಡೆದುಕೊಂಡ ರೀತಿ ಮರುಳುಸಿದ್ಧಮ್ಮನವರಿಗೆ ವಿಶೇಷ ನೋವನ್ನುಂಟುಮಾಡಿದವು. ಅಣ್ಣಂದಿರು ತಂದೆ ಅಷ್ಟು ಬೈದರೂ ಹೊಡೆದರೂ ಒಂದು ಉತ್ತರವನ್ನೂ ತಿರುಗಿಕೊಡದೆ ಪ್ರತಿಕ್ರಿಯೆಯನ್ನು ಪ್ರದರ್ಶಿಸದೆ ಮೌನವಾಗಿಯೇ ಇದ್ದ ಮಗನ ಬಗೆಗೆ ಅಪಾರ ಕನಿಕರ ಮೂಡಿ ರಾತ್ರಿಯೆಲ್ಲಾ ಕಣ್ಣೀರ್ಗರೆದರು. ಪತಿ ಗಟ್ಟಪ್ಪನವರಿಗೆ 'ನೀವೆಲ್ಲ ಸೇರಿ ರುದ್ರಪ್ಪನನ್ನು ಅಷ್ಟು ಹೊಡೆದು ಬೈದು ತಿರಸ್ಕರಿಸಿದ್ದು ಸರಿಯೇ' ? ಎಂದು ಪ್ರಶ್ನಿಸಿದಳು. ಅವನು ಎರಡು ರೂಪಾಯಿಗೆ ಮೇಕೆಯನ್ನು ಮಾರಿ ಮಾಡಿದ್ದಾದರೂ ಏನು ? ತನ್ನ ಹಿಂದಿನಿಂದ ಬಂದ ಜೀವ ದಯಾಪರತೆಗೆ ಖರ್ಚುಮಾಡಿದನಲ್ಲವೆ? ಪೂಜೆ ದೇವರು ದೈವ ಎಂದು ಮೊದಲಿನಿಂದಲೂ ಏನೋ ಒಂದು ಶ್ರದ್ಧೆಯಲ್ಲಿ ಬಂದು ಅವನು ಕೊಂಡು ತಂದುದು ಕರ್ಪೂರ ಭಸ್ಮದ ಗಟ್ಟಿಗಳಲ್ಲವೆ ? —ಇತ್ಯಾದಿಯಾಗಿ ಕೇಳಿದ ಹೆಂಡತಿಯ ಮಾತುಗಳನ್ನು ಕೇಳಿ ಗಟ್ಟಪ್ಪನ ಕಣ್ಣಲ್ಲೂ ನೀರಾಡಿತು. ರಾತ್ರಿ ಚಿಕ್ಕಮಗನನ್ನು ಹೊಡೆದುದು ಅಪರಾಧವಾದ ಹಾಗೆ ಆಯಿತು. ಐದು ಬೆರಳುಗಳು ಸರಿಯಿರುತ್ತವೆಯೇ ? ಅನೇಕ ಮಕ್ಕಳಲ್ಲಿ ಅಂಥವರೊಬ್ಬರುಹುಟ್ಟಿರುತ್ತಾರೆ. ಅದನ್ನು ಸಹಿಸಿಕೊಳ್ಳದೆ ನಾವೆಲ್ಲ ಸೇರಿ ಅವನ ಮನಸ್ಸಿಗೆ ನೋವಾಗುವಂತೆ ವರ್ತಿಸಿದ್ದು ಅಪರಾಧವೆಂದುಕೊಂಡು ಅವನೂ ಕಣ್ಣಿಗೆ ಕಣ್ಣು ಹಚ್ಚದೆ ರಾತ್ರಿಯನ್ನೆಲ್ಲಾ ಕಳೆಯುತ್ತಿದ್ದ. ಬೆಳಗಾದೊಡನೆ ನಿನ್ನೆ ರಾತ್ರಿ ನಡೆದ ಪ್ರಸಂಗವನ್ನು ಮರೆತು ಬಿಡು ಮಗನೇ; ನಾವೆಲ್ಲ ನಿನ್ನನ್ನು ಹೊಡೆದದ್ದು ತಪ್ಪಾಯಿತೆಂದು ಹೇಳಿಕೊಂಡು ಬಿಡೋಣವೆನ್ನಿಸಿತು, ಗಟ್ಟಪ್ಪನವರಿಗೆ. ತಾಯಿಯ ಕರುಳು ಮಗನನ್ನು ನೆನೆನೆನೆದು ಬಿಕ್ಕಿಬಿಕ್ಕಿ ಅಳುವಂತೆ ಮಾಡಿತ್ತು. ಕೊನೆಗೆ ಗಂಡನಿಗೆ 'ರುದ್ರಪ್ಪನಿಗೆ ಈ ವರ್ಷ ಮದುವೆ ಮಾಡಿಬಿಡೋಣ. ಮದುವೆಯಾದರೆ ಎಲ್ಲ ಸರಿ ಹೋಗುತ್ತದೆ.' [11] ಎಂದು ಗಂಡನಿಗೆ ಹೇಳಿ ತಮ್ಮ ಮಗಳ ಮಗುವೊಂದನ್ನು ತಂದು ಮದುವೆಮಾಡಿ ಕತ್ತಲೆಯೊಡನೆ ಪ್ರಕಾಶದ ಸ್ನೇಹ ಮಾಡಿಸಿಬಿಡುವ ಮಂಡಿಗೆಯನ್ನು ಮನಸ್ಸಿನಲ್ಲಿಯೇ ತಿಂದಳು, ಮರುಳ ಸಿದ್ಧಮ್ಮ. ಮಗನ ಆಜಾನು ಬಾಹುತ್ವ, ಹೊಳೆವ ಕಣ್ಣು, ಮೇಘ ಮಂಡಲ ಧ್ವನಿ, ಎಂಥ ಸನ್ನಿವೇಶಕ್ಕೂ ತಡೆಯಬಲ್ಲ ವಜ್ರ ಶರೀರ, ಸದಾ ಮೌನವಾಗಿ ವರ್ತಿಸುವ ಗಂಭೀರ ನಡೆ, ತಾಳ್ಮೆ ಎಲ್ಲಕ್ಕೂ ಹೆಚ್ಚಾಗಿ ಭಕ್ತಿ ಚೇತನ, ಸರ್ವ ಜೀವ ದಯಾ ಪರತೆ ಒಂದೊಂದೂ ಮರುಳ ಸಿದ್ಧಮ್ಮನವರ ಹೃತ್ಪಟಲದ ಮೇಲೆ ಕಾಣಿಸಿಕೊಂಡು ಮರೆಯಾಗುತ್ತಿದ್ದವು. ಬೆಳಕಾಗುವುದನ್ನೇ ಕಾಯುತ್ತ ಕಣ್ಣಿಗೆ ಕಣ್ಣು ಹಚ್ಚದೆ ಹತ್ತಾರು ಸಲ ಎದ್ದೆದ್ದು ಮಲಗಿದಳು.

(ಮುಂದುವರಿಯುವುದು)

11 ಹದಿನಾಲ್ಕು ಹದಿನೈದರ ಹರೆಯದಲ್ಲಿ ಎಂತಹ ಮದುವೆಯೆಂದು ಯಾರಾದರೂ ಇಂದಿನವರು ಸಂಶಯ ತಾಳಬಹುದು. ಅಂದಿನ ದಿನಗಳಲ್ಲಿ 8–10 ವರ್ಷದ ಗಂಡುಮಕ್ಕಳಿಗೂ ಮದುವೆ ಮಾಡುವ ಪರಿಪಾಠವಿತ್ತು. ಮದುವೆಯೆಂದರೇನೆಂಬುದೇ ಗೊತ್ತಿಲ್ಲದ ಹಸುಳೆಗಳೂ ಹಸೆಯೇರಿ ಮದುವೆಯ ಸಂಭ್ರಮದಲ್ಲಿ ಮುಳುಗುತ್ತಿದ್ದವು. ಅದೊಂದು ಮೋಜಿನ ಪ್ರಸಂಗವೂ ಆಗಿರುತ್ತಿತ್ತು. ದಯವಿಟ್ಟು ಇಂದಿನ ಜನಜೀವನನೊಡನೆ ಅಂದಿನ ಜನಜೀವನವನ್ನು ತುಲನೆ ಮಾಡಬೇಕು.

# ಡಾ|| ಗುಬ್ಬಿವೀರಣ್ಣನವರ ಕಲಾ ಸೇವೆಯ ವಿಹಂಗಮ ನೋಟ

—ಚನ್ನಪ್ಪ ಎರೇಸೀಮೆ

[ಯಾವನು ರಂಗ ಭೂಮಿಗಾಗಿ ದುಡಿಯಲು ಬಗೆ ಯುವನೋ ಅವನು ರಂಗ ಭೂಮಿಯನ್ನು ಅಧ್ಯಯನ ಮಾಡ ಬೇಕು. - ಗಯಟೆ]

ರನ್ನ ರಾಘವಾಂಕರಂತಹ ನಾಟ್ಯ ಪ್ರತಿಭೆಯುಳ್ಳ ಕವಿಗಳು ಕನ್ನಡಸಾಹಿತ್ಯದಲ್ಲಿ ವಿಶಿಷ್ಟ ರಸಸ್ಫೂರ್ತಿಯನ್ನು ಓದುಗರಿಗೆ ಉಂಟುಮಾಡುವುದರೊಂದಿಗೆ ೧೬೭೦ರಲ್ಲಿ ಚಿಕ್ಕದೇವರಾಜರ ಕಾಲದಲ್ಲಿ ರಚಿತವಾದ ಸಿಂಗರಾರ್ಯನ 'ಮಿತ್ರಾವಿಂದ ಗೋವಿಂದ' ಎಂಬುದೇ ಮೊದಲ ಪ್ರತ್ಯೇಕ ನಾಟಕ ಕೃತಿ ಅದೂ 'ರತ್ನಾವಳಿ' ನಾಟಕದ ಅನುವಾದ. ಆದರೆ ರಂಗಾಭಿನಯಕ್ಕೆ ಸಾಕಷ್ಟು ಸಿದ್ಧತೆಗಳೊಂದಿಗೆ, ಪರಿಕರಗಳೊಂದಿಗೆ ಅಭಿನಯಿಸಲು ಆರಂಭವಾದುದು ೧೮೮೦ರಲ್ಲಿ. ಅಭಿನವ ಕಾಳಿದಾಸರೆಂದು ಪ್ರಖ್ಯಾತರಾದ ಬಸವಪ್ಪ ಶಾಸ್ತ್ರಿಗಳು ಸಂಸ್ಕೃತ ನಾಟಕಗಳನ್ನು ಅತ್ಯಂತ ಯಶಸ್ವಿಯಾಗಿ ಕನ್ನಡಕ್ಕೆ ತಂದುಕೊಟ್ಟರಷ್ಟೆ. ಅರಸು ಮನೆತನದಲ್ಲಿ ನಾಟಕದ ಕಡೆಗೆ ವಿಶೇಷ ಒಲವನ್ನು ಇರಿಸಿಕೊಂಡಿದ್ದ ರಸಿಕಾವತಂಸರೆಂದು ಪ್ರಸಿದ್ಧಿ ಪಡೆದ ಶ್ರೀ ಚಾಮರಾಜೇಂದ್ರ ಒಡೆಯರವರು ಅರಮನೆಯ ನಾಟಕ ಸಂಘವನ್ನು ಪ್ರಾರಂಭಿಸಿ ಹಲವು ಕಲಾಭಿಲಾಷಿಗಳ ಕಲೆ ವಿಕಾಸವಾಗಲು ಅವಕಾಶ ಮಾಡಿದರು. ಕ್ರಮೇಣ ನಾಡಿನಲ್ಲಿ ಚಿಕ್ಕಚಿಕ್ಕ ನಾಟಕ ಸಂಘಗಳು ಏರ್ಪಟ್ಟವು. ಅಂತಹ ಸಂಘಗಳಲ್ಲಿ ಗುಬ್ಬಿ ಶ್ರೀ ಚೆನ್ನಬಸವೇಶ್ವರ ಕೃಪಾ ಪೋಷಿತ ನಾಟಕ ಸಂಘವೂ ಒಂದು.

ಈ ಸಂಘವು ೧೮೮೪ನೆಯ ವರ್ಷದಲ್ಲಿ ತುಮಕೂರು ಜಿಲ್ಲೆಯ ರಸಿಕ ಕಲಾಭಿಮಾನಿಗಳಾದ ಕೆಲವೇ ಕೆಲವು ಉತ್ಸಾಹಶಾಲಿಗಳ ಆಸೆಯಿಂದ ಉದ್ಭವಿಸಿತು. ಶ್ರೀ ಚಂದಣ್ಣ, ಶ್ರೀ ಅಬ್ದುಲ್ ಅಜೀಜ್, ಸಾಹುಕಾರ್ ನೀಲಕಂಠಪ್ಪ ಮುಂತಾದವರು ಸ್ಥಳೀಯ ಗಾಯನ, ವಾದ್ಯ ಪಟುಗಳ ಸಹಾಯದೊಂದಿಗೆ ೧೮೮೪ರಂದು ಗುಬ್ಬಿಗ್ರಾಮದಲ್ಲಿ ಆಡಿದ 'ಕುಮಾರರಾಮ ಚರಿತ್ರೆ' ನಾಟಕಕ್ಕೆ ಐತಿಹಾಸಿಕ ಮಹತ್ವವಿದೆ. ಮೈಸೂರಿನ ಶ್ರೀಮನ್ಮಹಾರಾಜ ಜೈ ಚಾಮರಾಜ ಒಡೆಯರು ತಮ್ಮ ಪ್ರವಾಸಕಾಲದಲ್ಲಿ ಒಮ್ಮೆ ಗುಬ್ಬಿಗೆ ಆಕಸ್ಮಾತ್ ಬಂದಾಗ ಅಲ್ಲಿ ಆಡುತ್ತಿದ್ದ, 'ಕುಮಾರರಾಮ' ನಾಟಕವನ್ನು ಕಂಡುದು ಆ ಕಂಪನಿಯ ಇತಿಹಾಸಕ್ಕೊಂದು ಹೊಸ ತಿರುವನ್ನೇ ಉಂಟುಮಾಡಿತು. ಆ ಪ್ರದರ್ಶನವನ್ನು ಕಂಡು ಪ್ರಭಾವಿತರಾದ ಮಹಾರಾಜರು ಈ ಕೆಳಗಿನ ಪ್ರೋತ್ಸಾಹದ ನುಡಿಗಳನ್ನಾಡಿದರು. "ನಾಟಕವು ಬಹಳ ನಾಗರೀಕತೆಯಿಂದ ಚೆನ್ನಾಗಿ ಅಭಿನಯಿಸಲ್ಪಟ್ಟಿತು. ನಟರೆಲ್ಲರೂ ಉತ್ಸಾಹಶಾಲಿಗಳಾದ ತರುಣರೂ ಚತುರರೂ ಆದುದರಿಂದ ಈ ಗ್ರಾಮದಲ್ಲಿ ನಾಟಕಕಲೆಯು ವಿಶೇಷವಾಗಿ ಅಭಿವೃದ್ಧಿ ಹೊಂದುವ ಸೂಚನೆಗಳು ಕಾಣುತ್ತಿವೆ. ನಮಗೆ ಬಹಳ ಸಂತೋಷವಾಯಿತು."

ಈ ರೀತಿ ಪ್ರಾರಂಭವಾಗಿ ಬೆಳೆದುಬಂದ ಈ ನಾಟಕ ಸಂಘಕ್ಕೆ ೧೮೯೬ರಲ್ಲಿ ಗುಬ್ಬಿ ವೀರಣ್ಣ ಅವರು ೬ ವರ್ಷದ ಬಾಲಕನಾಗಿದ್ದಾಗ, ಹುಲಿಕಲ್ ಮುಕ್ಕಾಂನಲ್ಲಿ ಸಂಘದ ನಾಟಕಗಳು ನಡೆಯುತ್ತಿರುವಾಗ ಸೇರಿಕೊಂಡರು. ಹರಿಶ್ಚಂದ್ರ ನಾಟಕದ ಲೋಹಿತಾಶ್ವ ಪಾಂಡವ ಜಯದಲ್ಲಿ ಸೂರ್ಯ, ಧರ್ಮಪಾಲ ಚರಿತೆಯಲ್ಲಿ ಸಿರಿಯಾಳಕುಮಾರ ಮುಂತಾದ ಪುಟ್ಟ ಪಾತ್ರಗಳನ್ನು ಯಶಸ್ವಿಯಾಗಿ ಅಭಿನಯಿಸಿ ಹಿರಿಯರ ಮೆಚ್ಚುಗೆಗೆ ಪಾತ್ರನಾದ ಬಾಲಕ ಗುಬ್ಬಿ ವೀರಣ್ಣ. ಹೀಗೆ ಕಲೆಯ ಮಡಿಲಲ್ಲಿ ಬೆಳೆದು ದೊಡ್ಡವನಾದ ವೀರಣ್ಣ.

ಮುಂದಿನ ದಿನದಲ್ಲಿ ಸಂಘಟನಾಶಕ್ತಿ ಹಾಗೂ ದಕ್ಷತೆ ವೀರಣ್ಣನವರಲ್ಲಿ ದಿನೇ ದಿನೇ ಅಭಿವೃದ್ಧಿಗೊಂಡವು. ಸಮಯೋಚಿತ ಸಲಹೆಗಳನ್ನು ನೀಡುವುದರಲ್ಲಿ ಮತ್ತು ಬಂದಂತಹ ಸಂದಿಗ್ಧ ಪರಿಸ್ಥಿತಿಗಳನ್ನು ಬುದ್ಧಿವಂತಿಕೆಯಿಂದ ಎದುರಿಸಿದವರಲ್ಲಿ ಇವರ ವಿಚಕ್ಷಣ ಬುದ್ಧಿ ಸಂಘದೊಡೆಯರಿಗೆ ಮೆಚ್ಚಿಗೆ ತಂದಿತು. ಸಮಯ ಬಂದರೆ ಯಾವ ನಾಟಕದಲ್ಲಿ ಯಾವ ಸ್ತ್ರಿ-ಪುರುಷರ ಪಾತ್ರಗಳನ್ನು ಬೇಕಾದರೂ ಅಭಿನಯಿಸಿ ನಾಟಕವನ್ನು ತೂಗಿಸಬಲ್ಲವರಾಗಿದ್ದರು. ಒಂದು ದಿನ ಶ್ರೀ ನಕಲಿ ದೊಡ್ಡನಂಜಪ್ಪನವರು ಕಾರಣಾಂತರದಿಂದ ಎಲ್ಲಿಗೋ ಹೋದವರು ಸಕಾಲದಲ್ಲಿ ಬಾರದಿದ್ದಾಗ ವೀರಣ್ಣನವರೇ ಆದಿಮೂರ್ತಿ ಮತ್ತು ಕಳ್ಳನ ಪಾತ್ರವನ್ನು (ಸದಾರಮೆ) ಅಭಿನಯಿಸಿದುದು ಅವರ ಕಲಾಭಿರುಚಿಯ ದ್ಯೋತಕವಾಗಿದೆ. ಅಂದಿನಿಂದಂತೂ ಅವರು ನಕಲಿ ವೀರಣ್ಣನೆಂದೇ ಹೆಸರಾಗಿ ಆ ಪಾತ್ರಗಳಿಗೆ ಖಾಯಂ ಆದರು.

೧೯೧೬ ರಿಂದ ಶ್ರೀ ಗುಬ್ಬಿ ಚನ್ನಬಸವೇಶ್ವರ ನಾಟಕ ಸಂಘವು ಜಿ. ಹೆಚ್. ವೀರಣ್ಣನವರ ಮತ್ತು ಶ್ರೀ ನಾಗರಾಜಪ್ಪನವರ ಆಡಳಿತದಲ್ಲಿ ನಡೆಯಲಾರಂಭಿಸಿತು. ಆಡಳಿತದ ಹೆಚ್ಚು ಜವಾಬ್ದಾರಿಯೆಲ್ಲಾ ವೀರಣ್ಣನವರ ಮೇಲೆಯೇ ಇರುತ್ತಿತ್ತು. ಆ ಸಮಯಕ್ಕೆ ಶ್ರೀಮತಿ ಸುಂದರಮ್ಮನಂತಹ ಉತ್ತಮ ಗಾಯಕಿಯೂ ಮತ್ತು ಚತುರೆಯರಾದ ಅನೇಕ ಸ್ತ್ರೀಯರೂ ಕಂಪನಿಯಲ್ಲಿ ಅಭಿನಯಿಸತೊಡಗಿದರು. ಆಗ ಇವರ ಸಂಘದಲ್ಲಿ ಆಡುತ್ತಿದ್ದ ನಾಟಕಗಳು ಸದಾರಮೆ, ಗುಲೆಬಕಾವಲಿ, ಪ್ರಭಾಮಣಿ ವಿಜಯ, ವಸಂತ ಮಿತ್ರ ವಿಜಯ, ಪ್ರಹ್ಲಾದ ಚರಿತ್ರೆ, ಸುಭದ್ರಾ ಪರಿಣಯ ಮುಂತಾದುವು. ಇವು ಬಹಳ ಲೋಕಪ್ರಿಯವಾಗಿದ್ದವು. ವಿನೋದ ಪಾತ್ರಗಳನ್ನು ವೀರಣ್ಣನವರು ವಹಿಸಿಕೊಂಡು ಜನರನ್ನು ಹೊಟ್ಟೆ ಬಿರಿಯುವಂತೆ ನಗಿಸುತ್ತಿದ್ದರು. ಶ್ರೀಗಳಾದ ಸಿ. ಬಿ. ಮಲ್ಲಪ್ಪ, ಗಂಗಾಧರರಾಯರು, ವ್ಯಾಸರಾಯರು, ನಾರಾಯಣನಾಯಡು, ಅನಂತಾಚಾರ್ಯರು, ಹೆಚ್. ನಾರಾಯಣರಾಯರು ಮುಂತಾದ ಚತುರ ಕಲಾವಿದರು ಆಗ ಇವರ ಸಂಘದಲ್ಲಿ ಸೇರಿಕೊಂಡು ಕಂಪನಿಯ ಕೀರ್ತಿಯನ್ನು ದಿಗಂತ ವಿಶ್ರಾಂತಗೊಳಿಸತೊಡಗಿದರು.

ಮುಂದೆ ಶ್ರೀ ಬೆಳ್ಳಾವೆ ನರಹರಿ ಶಾಸ್ತ್ರಿಗಳಿಂದ 'ಶ್ರೀ ಕೃಷ್ಣಲೀಲಾ' ನಾಟಕವನ್ನು ಬರೆಸಿ ಹೋದಕಡೆಯಲ್ಲೆಲ್ಲಾ ಜಯಭೇರಿ ಬಾರಿಸಿದರು. 'ಕಂಸವಧೆಯಚರಿತ್ರೆ', 'ರುಕ್ಮಿಣೀ ಸ್ವಯಂವರ' ನಾಟಕಗಳೂ ಅವರಿಂದಲೇ ರಚಿತವಾಗಿ ಸಂಘಕ್ಕೆ ಹೆಸರನ್ನು ತಂದುಕೊಟ್ಟಂತಹವುಗಳು. ನಂತರ ನಟವರ್ಗಕ್ಕೆ ಶ್ರೀ ವರದಾಚಾರ್ಯರ ಶಿಷ್ಯರಾದ ಶ್ರೀ ಜಿ. ನಾಗೇಶರಾಯರು ಇವರ ಕಂಪನಿಗೆ ಬಂದು ಸೇರಿದರು.

ವೀರಣ್ಣನವರ ಸಂಘವು ಮದ್ರಾಸಿನಿಂದ ಮಹರಾಷ್ಟ್ರದವರೆಗೂ ಸುತ್ತಾಡಿ ಹಲವು ನಗರಗಳ ನಾಗರೀಕರ ಮನರಂಜಿಸಿದ ಸಂಘವೆಂಬುದನ್ನು ನೆನೆಸಿಕೊಳ್ಳಬಹುದು.

ಬೆಂಗಳೂರಿನಲ್ಲಿ ಹಲವು ನಾಟಕಗಳನ್ನು ಯಶಸ್ವಿಯಾಗಿ ಆಡಿದರು. ಶ್ರೀಮನ್ಮಹಾರಾಜ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರ ಅಪೇಕ್ಷೆಯಂತೆ ಜಗನ್ಮೋಹನ ಬಂಗ್ಲೆಯಲ್ಲಿ ನಾಟಕಗಳನ್ನು ಪ್ರದರ್ಶಿಸಿದರು. ಕಬೀರದಾಸ ನಾಟಕ ಬಹಳ ಮೆಚ್ಚಿಗೆಯಾಯಿತು. ಕಬೀರರ ಪಾತ್ರಧಾರಿ ಶ್ರೀ ಸಿ. ಬಿ. ಮಲ್ಲಪ್ಪನವರಿಗೂ ಶ್ರೀ ವೀರಣ್ಣನವರಿಗೂ ಪದಕಗಳನ್ನು ಬಿಲ್ಲತ್ತುಗಳನ್ನು ದಯಪಾಲಿಸಿ, ವೀರಣ್ಣನವರಿಗೆ 'ವರ್ಸೆಟೈಲ್ ಕಮೆಡಿಯನ್' ಎಂಬ ಬಿರುದನ್ನು ಕೊಟ್ಟರು. ಮೈಸೂರಿನ ನಾಗರೀಕರು ವೀರಣ್ಣನವರನ್ನು ಮಾನಪತ್ರವನ್ನು ಅರ್ಪಿಸುವುದರ ಮೂಲಕ ಗೌರವಿಸಿದರು.

ಬೆಂಗಳೂರಿನಲ್ಲಿ ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟಿಯವರ ದಿವ್ಯ ಅಧ್ಯಕ್ಷತೆಯಲ್ಲಿ ನಾಟಕವನ್ನು ಅಭಿನಯಿಸಿದರು. ಅಲ್ಲದೆ ಬೆಂಗಳೂರಿನಲ್ಲಿ ಇತರ ನಾಟಕಗಳನ್ನು ಪ್ರದರ್ಶಿಸಿ ಬೆಂಗಳೂರಿನ ನಾಗರೀಕರನ್ನು ತಮ್ಮ ವಿನೋದ ಪಾತ್ರಗಳಿಂದ ನಲಿಸಿದರು. ಬೆಂಗಳೂರಿನ ಜನತೆ ಇವರಿಗೆ 'ವಿನೋದ ರತ್ನಾಕರ' ಎಂಬ ಪ್ರಶಸ್ತಿಯನ್ನು ಬಹುಮಾನವನ್ನು ಇತ್ತು ಕಲಾಯೋಗ್ಯತೆಯನ್ನು ಸನ್ಮಾನಿಸಿದರು. ಮುಂದೆ ಬಿ. ಪುಟ್ಟಸ್ವಾಮಯ್ಯನವರಿಂದ ಬರೆಯಲ್ಪಟ್ಟ ಕುರುಕ್ಷೇತ್ರ ನಾಟಕ ಇವರ ಕಂಪನಿಯ ಚರಿತ್ರೆಯಲ್ಲಿ ಅತ್ಯಂತ ಮಹತ್ವದ್ದಾಗಿ ಕರ್ನಾಟಕ ಮಹರಾಷ್ಟ್ರಗಳಲ್ಲೆಲ್ಲ ಜಯಭೇರಿಯನ್ನು ಬಾರಿಸಿ ಕನ್ನಡ ರಂಗಭೂಮಿಯ ಇತಿಹಾಸಕ್ಕೆ ಮೆರಗುಕೊಟ್ಟಿತು.

ಮರಾಠಿ ಮುಂತಾದ ಭಾಷೆಗಳಲ್ಲಿನ ಒಳ್ಳೆಯ ನಾಟಕಗಳನ್ನು ಕನ್ನಡದಲ್ಲಿ ಬರೆಸಿ ಆಡಿದರು. ಅಂತಹ ನಾಟಕಗಳಲ್ಲಿ 'ರಾಜಭಕ್ತಿ' ಕರ್ಣಾಟ ಸಾಮ್ರಾಜ್ಯ ಸ್ವಾಮಿನಿಷ್ಠೆ' ಗಳನ್ನು ನೆನೆಯಬಹುದು.

ಉಡುಪಿಯಲ್ಲಿ ಶ್ರೀ ಕೃಷ್ಣಲೀಲಾ ನಾಟಕವನ್ನು ಪ್ರದರ್ಶಿಸಿ ಆ ವರ್ಷ ಪರ್ಯಾಯದಲ್ಲಿ ಮಠಪಿಠಾಧಿಪತ್ಯಕ್ಕೆ ಬಂದ ಶ್ರೀ ಸೋದೆ ಮಠದ ಶ್ರೀ ವಿಶ್ವೇಂದ್ರ ತೀರ್ಥ ಸ್ವಾಮಿಗಳವರು ವೀರಣ್ಣನವರಿಗೆ 'ನಾಟ್ಯಕಲಾ ನಿಪುಣ'ಎಂಬ ಬಿರುದನ್ನ ಕಾಣೂರು ಮಠದ ಗುರುಗಳು ರಸಿಕ ಶಿರೋಮಣಿ ಎಂಬ ಬಿರುದನ್ನು ಅನುಗ್ರಹಿಸಿದರು.

ತಮ್ಮ ಪ್ರಖ್ಯಾತ ನಾಟಕಗಳನ್ನು ಚಲನಚಿತ್ರಗಳನ್ನಾಗಿ ತೆಗೆಯಬೇಕೆಂದು ಅಪೇಕ್ಷಿಸಿ 'ಸದಾರಮೆ'

ಚಲನ ಚಿತ್ರವನ್ನು ಮೊದಲು ಪ್ರಾರಂಭಿಸಿದರು. ಸ್ಟುಡಿಯೋದಲ್ಲಿ ವಿರಾಮ ದೊರೆತಾಗ ನಾಟಕಗಳನ್ನು ಆಡುತ್ತಿದ್ದರು. ಆಗ ಪ್ರಸಿದ್ಧ ನಟಿಯರಾದ ಅಶ್ವತ್ಥಮ್ಮ ಶ್ರೀಮತಿ ಜಯಮ್ಮನವರೇ ಮೊದಲಾದವರು ಸ್ತ್ರೀ ಪಾತ್ರಗಳನ್ನು ಅತ್ಯದ್ಭುತವಾಗಿ ರಸಿಕಜನ ಮನಸೂರೆಗೊಳ್ಳುವಂತೆ ಅಭಿನಯಿಸುತ್ತಿದ್ದರು. ಅಂದಿನ ಅವರ ಪಾತ್ರಗಳ ಸಂಗೀತ, ರಸಾಭಿನಿವೇಶನ ಪ್ರಸಂಗಗಳನ್ನು ಜನತೆ ಇನ್ನೂ ನೆನೆಯುತ್ತಿದೆ. ಅಶ್ವತ್ಥಮ್ಮನ ಸಂಗೀತ, ರಸಿಕರಿಗೆ ರಸದೌತಣವಾಗಿತ್ತು. ಆಂಧ್ರ ದೇಶದಲ್ಲಿಯೂ ನಾಟಕಗಳನ್ನು ಈ ಸಂಘವು ಬಹು ವಿಜೃಂಭಣೆಯಿಂದ ಅಭಿನಯಿಸಿ ರಸಿಕರನ್ನು ಬೆರಗುಗೊಳಿಸಿ ಕನ್ನಡ ನಾಡಿನ ಕೀರ್ತಿಯನ್ನು ಸುತ್ತಲೂ ಹರಡಿದರು. 'ಅಭಿನವ ವ್ಯಾಸಮುನಿ" ಎಂದು ಬಿರುದಾಂಕಿತರಾದ ಆಂಧ್ರ ನಾಡಿನ ಶ್ರೀಪಾದ ಕೃಷ್ಣಮೂರ್ತಿ ಶಾಸ್ತ್ರಿಗಳವರು, ಸಂಘದ ನಾಟಕಗಳನ್ನು ನೋಡಿ ಕನ್ನಡ ಕಲಾವಿದರ ನೈಪುಣ್ಯವನ್ನೂ, ಗಾಯನ ಕಲೆಯನ್ನೂ ಮುಕ್ತ ಕಂಠದಿಂದ ಶ್ಲಾಘಿಸಿ ವೀರಣ್ಣನವರಿಗೆ ಕರ್ನಾಟಕಾಂಧ್ರ ನಾಟಕ ಸಾರ್ವಬೌಮ ಎಂಬ ಬಿರುದನ್ನು ಕೊಟ್ಟರು. ಈ ಬಿರುದನ್ನು ವೀರಣ್ಣನವರು ಪಡೆದು ಕನ್ನಡ ನಾಡಿಗೆ ಕನ್ನಡ ಕುಲಕೋಟಿಗೆ ಕೀರ್ತಿ ತಂದುದನ್ನು ಯಾರೂ ಮರೆಯುವಂತಿಲ್ಲ ಆಂಧ್ರ ಮಹಾರಾಷ್ಟ್ರ ನಾಡುಗಳ ಜನತೆಯಲ್ಲಿ ಕನ್ನಡ ನಾಟಕ, ಸಾಹಿತ್ಯ, ಪಾತ್ರವರ್ಗಕೌಶಲ್ಯ ಮನೆಮಾತಾಗುವಂತೆ ಮಾಡಿದವರು ಶ್ರೀ ವೀರಣ್ಣನವರೊಬ್ಬರೇ. ಇತ್ತೀಚೆಗೆ ಚಲನ ಚಿತ್ರಯುಗ ಪ್ರಾರಂಭವಾದ ಮೇಲೆ ಜನರ ಅಭಿರುಚಿ ಬದಲಾದುದನ್ನು ಗಮನಿಸಿ ಚಲನ ಚಿತ್ರ ತಯಾರಿಕೆಯ ಕಡೆ ವಿಶೇಷ ಗಮನ ಕೊಟ್ಟು, 'ಸುಭದ್ರ," 'ಜೀವನ ನಾಟಕ' 'ಹೇಮರೆಡ್ಡಿ ಮಲ್ಲಮ್ಮ" ಚಿತ್ರಗಳನ್ನು ವೀರಣ್ಣನವರು ತಯಾರಿಸಿದರು. ಆದರೂ ತಮ್ಮ ನಾಟಕ ಕಂಪೆನಿಯನ್ನು ಮುರಿದಿರಲಿಲ್ಲ. ಒಂದು ದಿಸೆಯಲ್ಲಿ ಅದು ತನ್ನ ಕಾರ್ಯ ಮಾಡುತ್ತಲೇ ಇತ್ತು. ಮೈಸೂರಿನಲ್ಲಿ ಮಹಾರಾಜರ ಸಮ್ಮುಖದಲ್ಲಿ ಪುನಃ ನಾಟಕಗಳನ್ನು ಆಡುತ್ತಿರುವಲ್ಲಿ ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರು ಶ್ರೀ ವೀರಣ್ಣನವರನ್ನು ಕರೆಸಿ ಆಶೀರ್ವದಿಸಿ 'ತಾರಾ" ಎಂಬ ಆನೆಯ ಮರಿಯನ್ನು ನಾಟಕಗಳಲ್ಲಿ ಉಪಯೋಗಿಸಿಕೊಳ್ಳಲು ಕೊಟ್ಟರು. ಕುರುಕ್ಷೇತ್ರ, ದಶಾವತಾರ ನಾಟಕಗಳಲ್ಲಿ ರಂಗಭೂಮಿಯ ಮೇಲೆ ಆನೆ ಕುದುರೆ ಮುಂತಾದ ಜೀವಂತ ಪ್ರಾಣಿಗಳನ್ನು ತಂದು ಯಶಸ್ವಿಯಾಗಿ ಅಭಿನಯಿಸಿ ಪ್ರೇಕ್ಷಕರ ಅಭಿನಂದನೆಗೆ ಪಾತ್ರರಾದವರಲ್ಲಿ ವೀರಣ್ಣನವರೇ ಮೊದಲಿಗರು. ರಂಗಭೂಮಿ ಇತಿಹಾಸದಲ್ಲೇ ಈ ರೀತಿಯ ಕ್ರಾಂತಿ ಈ ಪೂರ್ವದಲ್ಲಿ ನಡೆಯಲಿಲ್ಲ. ಈಗಂತೂ ಇಂಥ ಸಾಹಸ ದಿನಗಳೇ ಕಡಿಮೆಯಾಗಿ ರಂಗಭೂಮಿಯ ಉಜ್ವಲ ಇತಿಹಾಸದ ಹ್ರಾಸ ಕಾಲವೊದಗಿದಂತಾಗಿದೆ.

ಇವರು ಕೇವಲ ಬಡವರಾಗಿದ್ದು ಬಾಲ್ಯದಿಂದಲೂ ಕಲೆಗಾಗಿ ದುಡಿದು ಕಲಾ ಪ್ರಪಂಚದಲ್ಲಿ ಬೆಳಗಿ ಕಲಾಭಿವೃದ್ಧಿಗೂ ಕಲಾವಿದರ ಉತ್ಕರ್ಷಕ್ಕೂ ಕಾರಣರಾಗಿ ಅವರಿಗೆ ಮಾರ್ಗದರ್ಶನ ನೀಡಿದವರಲ್ಲಿ ವೀರಣ್ಣನವರು ಅಗ್ರಗಣ್ಯರು. ಅವರ ಜೀವನವೇ ಕಲೆಯ ಉಸಿರು. ಇತ್ತೀಚಿನ ಪ್ರಖ್ಯಾತ ಚಲನ ಚಿತ್ರ ನಟರಾದ ಡಾ॥ ರಾಜಕುಮಾರ್, ನರಸಿಂಹರಾಜು, ನಾಗೇಂದ್ರರಾವ್, ಎಂ. ಪೀರ್, ಲಕ್ಷ್ಮೀಬಾಯಿ, ಸುಬ್ಬಯ್ಯನಾಯ್ಡು ಮುಂತಾದವರು ಅವರ ಗರಡಿಯಲ್ಲಿ ತಯಾರಾದ ಕಲಾಪಟುಗಳು, ಎಂಬುದನ್ನು ನೋಡಿದರೆ ಅವರು ಕಲಾಭಿವೃದ್ಧಿಗೆ ಶ್ರಮಿಸಿರುವುದು ಸ್ಪಷ್ಟಗೋಚರವಾಗುತ್ತದೆ. ಇಂಥ ಮಹಾ ಸಾಹಸಿ, ರಸಿಕ, ಅಭಿನಯ ಕುಶಲ, ಕಲಾಜೀವಿ ಶ್ರೀ ವೀರಣ್ಣನವರನ್ನು ರಸಿಕಲೋಕ ಎಂದೂ ಮರೆಯುವಂತಿಲ್ಲ. (ಆಧಾರದಿಂದ)





# ಕಾಯಕ ಯೋಗಿ
# ಶ್ರೀ ಶಿವಕುಮಾರ ಮಹಾ ಸ್ವಾಮಿಗಳು

—ಶ್ರೀ ಕೆ. ತಿಪ್ಪೇರುದ್ರಯ್ಯ

ಶರಣ ಭರಿತ ಶಿವನು, ಶಿವ ಭರಿತ ಶರಣನೆಂಬುದು ನಿಜವಲ್ಲ.
ಜಗದ್ಭರಿತ ಶಿವನು, ಶಿವ ಭರಿತ ಜಗವೆಂಬುದು ಹುಸಿ ನೋಡಾ !
ಏನು ಕಾರಣ ವೆಂದೊಡೆ, ಜಗಕ್ಕೆ ಪ್ರಳಯ ಮಹಾ ಪ್ರಳಯುಗಳುಂಟು
ಇದು ಕಾರಣ ಪ್ರಳಯಾತೀತ ಶರಣಸನ್ನಿಹಿತ ನಮ್ಮ ಅಖಂಡೇಶ್ವರನು—

ಶರಣನಿಹ ಮರ್ತ್ಯವನು ಹರನ ಕೈಲಾಸವನು
ಹಿಂದು ಕಿರಿದಿನ ಹೂಡೆಯಿಂದೆ ಪ್ರಮಥರ್‌ಗೂಡಿ
ಪರಿಕಿಸಲ್ ಬೇಕೆಂದು ನವಸೂತ್ರ ಧರ್ಮಚಿಂತಾಲಿನಿಂ ತೂಗಲೊಡನೆ
ಶರಣನಿಹ ಮರ್ತ್ಯವೀ ಧರೆಯು ಬಿಟ್ಟೀಳದಿರೆ
ಹರನ ಕೈಲಾಸ ಮೇಲಕೆ ಪೋದುದದರಿಂದೆ
ಧರೆಗೆನ್ನ ಕೈಲಾಸ ಸರಿಯಾಗಲಿಲ್ಲೆಂಬ ವಾಂಛೆಯಿಂದಾಗ ಶಿವನು....

(—ಶ್ರಿ ಬಸವಲಿಂಗ ಶರಣರ " ಧರ್ಮಾಚಾರ 'ಪ್ರಕರಣದಿಂದ)

ಮುಚ್ಚಂಜೆಯು ಮುಗಿಯುತ್ತಿದೆ. ಮನೆಗೈತಂದ ದಿನ ಮಣಿ ದೇವನಿಗೆ, ಸಂಧ್ಯಾಸತಿಯು ಆರತಿಯನ್ನೆತ್ತುತಿರುವಳೋ ಎಂಬಂತೆ. ಮನೆ – ಮಠಗಳಲ್ಲಿ ದೀಪಾರಾಧನೆಯಾಗುತ್ತಿದೆ. ದಿನವೂ ಪ್ರವೃತ್ತಿಗಾಮಿಯಾಗಿದ್ದ ಶಬ್ದ ಬ್ರಹ್ಮನು, ಅಶಬ್ದ ಸಮಾಧಿಯಲ್ಲಿ ನಿವೃತ್ತಿ ಮುಖನಾಗಲು ಸಾಧಿಸುತ್ತಿರುವ ಸಮಯ-

ದೇವ ಪ್ರಪನ್ನಾರ್ತಿ ಹರ ಪ್ರಸೀದ
ಪ್ರಸೀದ ವಿಶ್ವೇಶ್ವರ ವಿಶ್ವರೂಪ
ಪ್ರಸೀದ ಗಂಗಾಧರ ಚಂದ್ರಮೌಳಿ
ಮಾಂ ತ್ರಾಹಿ ಸಂಸಾರ ಭಯಾದ ನಾಥಂ ॥

ಎಂದು ಶ್ರೀಗುರುವಿನ ಮುಮ್ಮೇಳದಿಂದ ಪ್ರಾರಂಭವಾದ ಸಾಮೂಹಿಕ ಸುಶ್ರಾವ್ಯ ಸ್ತೋತ್ರಪಾಠವು, ಚಿದಾಕಾಶಕ್ಕೇರುತ್ತಿದೆ. ಈ ದೇವನಾಮಾಮೃತದ ನಿರರ್ಗಳ ಧಾರೆಯು

ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತ್ತಿದೆ।
ಮಾತು ಮನಂಗಳಿಂದತ್ತತ್ತ ವಿದೂರದ।
ಸಾತಿಶಯದ ನಿರುಪಾಧಿಕ ನಿರ್ಮಲ ॥ ಪ ।
ಪ್ರಣವಾಕಾರದ ಗುಣ ಮೂರು ಮುಟ್ಟದ।
ಗಣನೆಗತೀತಾರ್ಥವೆನೆ ತೋರುವ
ಅಣುಮಾತ್ರ ಚಲನೆಯಿಲ್ಲದ ಮೋಕ್ಷ ಚಿಂತಾ।
ಮಣಿಯೆನಿಸುವ ಶಂಭುಲಿಂಗವೆ ತಾನಾದ॥
ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ.....

ಮಂಗಳಾಚರಣೆಯೊಡನೆ ಆ ಕರುಣಾ ಸಾಗರನ ಚರಣ ಕಮಲದಲ್ಲಿ ತಲ್ಲೀನವಾಗುತ್ತಿದೆ.

ಶಾಲಿವನದ ಪೈರುಗಳ ಸಾಲಿನಂತೆ ಸಾಲು ಸಾಲಾಗಿ ಪದ್ಮಾಸನಸ್ಥಿತರಾದ ಬಾಲಕರ ಸಮುದ್ರರಾಶಿ· ಅವರ ನಿರ್ಮಲವಾದ ಮಡಿಯುಡಿಗೆ, ಭಯಭಕ್ತಿ ಭಾವದಿಂದ ಧರಿಸಿದ ಲಾಂಛನಾಲಂಕೃತ ಪ್ರಸನ್ನ ಮುಖಮುದ್ರೆಗಳು ಭದ್ರಾಸನದಲ್ಲಿ ಸ್ಥಾಣುವಿನಂತೆ ಮಂಡಿಸಿರುವ ಶ್ರೀಗುರುವರೇಣ್ಯನ ತೇಜಃಪುಂಜರಾಶಿಯ ದಿವ್ಯಪ್ರಭೆ. ಪರಮಾತ್ಮನ ಧ್ಯಾನ ಮಗ್ನ ಗಾನಲಹರಿಯು ಸಾವಧಾನವಾಗಿ ಘನಗಂಭೀರವಾದ ಕಂಠದಿಂದ ಸುಶ್ರಾವ್ಯವಾಗಿ, ಸುಲಲಿತವಾಗಿ ಉದ್ಬೋಧವಾಗುತ್ತಲೆ, ಒಕ್ಕೊರಲಿನ ಸಾಮೂಹಿಕ ಪ್ರಾರ್ಥನಾ ಗಾನವು ಆಕಾಶಕ್ಕೆದ್ದು ತೇಲುವುದು. ಈ ಮೊದಲೇ ವಿವರಿಸಿರುವಂತೆ, ಮಂಗಳಾಚರಣೆಯ ಕೊನೆಯಲ್ಲಿ ಕೆಲವುಗಳಿಗೆ ಧ್ಯಾನಮೌನ ತದನಂತರ ಶ್ರೀಗುರು ಪ್ರವಚನಾಮೃತಪಾನ. ಈ ದೇವೋನ್ಮಾದಕರವಾದನಿತ್ಯ ದೃಶ್ಯವನ್ನು ಎಷ್ಟು ದಿನ ಎಷ್ಟು ಕಾಲ ನೋಡಿದರೂ, ಕಣ್ಮನಗಳು ತಣಿಯಲಾರವು.

ಮುಂದಿನ ಕಾರ್ಯಕ್ರಮ ಸದ್ದು-ಗದ್ದಲ ಮಾಡದೆ, ಸಾಲಾಗಿ ಹರಿವ ಇರುವೆಗಳಂತೆ, ಶ್ರೀಗುರುಗಳ ಸನ್ನಿಧಿಗೆ ಸಾಲಾಗಿ ಸಮೀಪಿಸಿ, ಪೂಜ್ಯ ಶ್ರೀಗುರುಗಳಿಗೆ ನಮಿಸಿ, ಶ್ರೀ ಸಿದ್ಧಲಿಂಗೇಶ್ವರ ಪ್ರಸಾದ ನಿಲಯಕ್ಕೆ ಗಮಿಸಿ, ಶ್ರೀ ಗುರುಗಳ ಮೇಲುಪಚಾರಿತ ಪ್ರಸಾದ ತೃಪ್ತರಾಗಿ, ತಮ್ಮ ನಿಲಯಗಳಿಗೆ ಹೋಗಿ ವ್ಯಾಸಂಗದಲ್ಲಿ ಕೆಲವು ಕಾಲ ತೊಡಗಿದ್ದು ನಂತರ ನಿದ್ರಾದೇವಿಯ ವಶದಲ್ಲಿ ವಿರಮಿಸುವ 3-4 ಸಹಸ್ರ ಬಡವರು, ಅನಾಥರೂ ಆದ ಮಕ್ಕಳು.

ಮಠಕ್ಕೆ ಬಂದ ಯಾತ್ರಾರ್ಥಿಗಳೂ ಅಶಕ್ತರು, ಅಂಗವಿಕಲರೂ, ನಿರ್ಗತಿಕರಿಗೆ ಮತ್ತು ಮಠದ ಊಳಿಗದಾಳುಗಳಿಗೆ ಶ್ರೀಗುರುಗಳ ಪ್ರತ್ಯಕ್ಷದಲ್ಲಿ ಪ್ರಸಾದ ವಿನಿಯೋಗವಾಗುವುದು. ಕ್ಷೇತ್ರದಲ್ಲಿ "ಹತ್ತಿಸಿದ ಒಲೆ ಆರದಂತೆ" ಈ "ನಿತ್ಯ ದಾಸೋಹ"ವು ನಡೆಯುತ್ತಿರುವುದು. ಸತ್ಸಂಕಲ್ಪ ಮಾಡಿದ ಶರಣರ ಪೀಳಿಗೆಯಲ್ಲಿ ಉದಯಿಸಿದ ಸ್ವಾಮಿಯ ಮುಂದೆ ಜನ ತಮ್ಮ ತಾಪತ್ರಯವನ್ನು ತೋಡಿಕೊಳ್ಳುವರು. ಬಹು ಸಹನೆ, ಸಮಾಧಾನ, ಶಾಂತಿಯಿಂದ ಅವರ ಮಾತನ್ನು ಕಿವಿಗೊಟ್ಟು ಕೇಳಿ, ಸೂಕ್ತ ಸಲಹೆ, ಸೂಚನೆ ಸಹಾಯಾದಿಗಳನ್ನು ಮಾಡುವರು. ಸಂಬಂಧ ನಂತರ "ಮಂಚದ" ಮೇಲೆ ಆಸೀನರಾಗಿ, ನಂಬಿ ಬಂದ ಭಕ್ತರ ಅನುವು ಆಪತ್ತುಗಳನ್ನು ಸಾವಧಾನದಿಂದ ಆಲಿಸಿ, ಶಿವಧ್ಯಾನಮಗ್ನರಾಗಿ ಅವರ ಕೋರಿಕೆಯಂತೆ ಯಂತ್ರಮಂತ್ರಾದಿಗಳಿಂದ ಅವರನ್ನು ಆರೈಕೆ ಮಾಡಿ ಕಳುಹಿಸುವರು. ಯಾತ್ರಾರ್ಥಿಗಳನ್ನು ದರ್ಶನಲಾಭವನ್ನಿತ್ತು, ಅವರ ಊಟ ಉಪಚಾರಾದಿಗಳಿಗೆ ಸಜ್ಜುಗೊಳಿಸುವುದಕ್ಕೆ ಗಮನವೀಯುವರು. ಯಾರು ಎಷ್ಟು ಹೊತ್ತಿನಲ್ಲಿ ಅವರ ದರ್ಶನವನ್ನು ತೆಗೆದುಕೊಂಡರೂ ಅವರಿಗೆ "ಊಟ ಮಾಡಿ" ಎಂದು ಹೇಳುವ ಉಚ್ಛ್ವಾಸ ನಿಶ್ವಾಸದಂತೆ ಸ್ವಭಾವಸಿದ್ಧವಾದ ಮಾತು. ಮಧ್ಯಾಹ್ನ ಲಿಂಗಪೂಜೆ ಲಿಂಗಾರ್ಪಿತ ಮಾಡಿ ಲಘುವಾದ ಪ್ರಸಾದ ಸ್ವೀಕಾರ ಪುನಃ ಕೆಲಸಕಾರ್ಯಗಳ ಬಿಡುವಿಲ್ಲದ ಕಾಯಕ ಸಮಾಧಿ. ಭಕ್ತರ ಬಿನ್ನಹಗಳನ್ನು ತೀರಿಸಲು, ಹತ್ತಿರ ದೂರವೆನ್ನದೆ ಪ್ರವಾಸ. ಸಮ್ಮೇಳನ, ಸಮಾರಂಭ, ದೇವರ ಪ್ರತಿಷ್ಠೆ, ಗೃಹ ಪ್ರವೇಶ, ಶಂಕುಸ್ಥಾಪನೆ, ಅಷ್ಟದಿಗ್ಬಂಧನ ಇತ್ಯಾದಿ ವಿವಿಧ ರೀತಿಯ ಕೆಲಸಗಳ ಸರಮಾಲೆ ಸಂಘ ಸಂಸ್ಥೆಗಳ ಬಹು ಹೊಣೆಗಾರಿಕೆಯ ಕಾರ್ಯಕಲಾಪಗಳು. "ಅತ್ಯತಿಷ್ಠದ್ದಶಾಂಗುಲ"ದಂತೆ, ಊಹೆಗೆ ನಿಲುಕದಷ್ಟು, ಏರಲಾರದ ಗೌರೀಶಂಕರ, ಕಾಂಚನಗಂಗಾ ಪರ್ವತರಾಶಿಯಂತೆ ಹೊರೆಹೊರೆಯಾಗಿ ಕಂತೆಕಂತೆಯಾಗಿ ರಾಶಿಯಾಗಿರುವ ಕೆಲಸಗಳು. ನೂಕಿದರೂ ಹಿಂತಿರುಗಿ ಬರುವ ಗೊದ್ದಗಳಂತೆ ಪುನಃ ಪುನಃ ಬರುತ್ತಿರುವ "ಅಹವಾಲು" ದಾರರು. ದಿನವೂ 3-4 ಸಾವಿರ ಮಕ್ಕಳು ಸೇರಿ ಅವರಿಗೆ ಊಟ, ಉಪಚಾರ ಇಷ್ಟನ್ನು ಸ್ವಾಮಿಗಳು ಹೇಗೆ ನಿಭಾಯಿಸುತ್ತಾರೋ ಶಿವನೇ ಬಲ್ಲ. ಚಿತ್ರಿಸಲಸದಳ "ರಾಮಾಯಣ" ಇದಲ್ಲವೆ. ಮಠದ ಕಟ್ಟಡಗಳು ಹೊಲಗದ್ದೆಗಳು ದನಕರುಗಳು ಇನ್ನಿತರ ಎಲ್ಲಾ ಮೇಲ್ವಿಚಾರಣೆಯನ್ನು ಸ್ವತಃ ಮಾಡುವುದು ಶ್ರೀಗಳವರ ದಿನಚರಿಗಳಲ್ಲಿ ಒಂದು.

ನಾಡೆಲ್ಲ ಬಂದು ನೆರೆದಿರ್ದ ಜಾತ್ರೆಯ ಪರುಷೆ,
ನೋಡಿ ಬೆರಗಾಗಿಯಿಂತೆಪ್ಪ ಸಾಮರ್ಥ್ಯಮಂ
ರೂಢಿಯೊಳು ಮುನ್ನ ಕೇಳಿದರಿಲ್ಲ ಕಂಡರೆಂತೂ ಇಲ್ಲವೆ
ನುತ ಹರೆದು ।

ನಾಡು ನಾಡೊಳಗೆಲ್ಲಿಯುಂ ಸಿದ್ಧಪತಿಯ ಕೊಂ
ಡಾಡುತ್ತ ರಾಯರಧಿಕಾರಿಗಳು ನಡೆತಂದು
ನೋಡುತ್ತ ಗುರುವಿಂಗೆ ಜೆಸಕೈದು ಬಾಳುತ್ತ ಮಿರಲು
ಕೌತುಕಂ ನೆಗೆದುದು ॥

ಅದನು ನಾ ಬಲ್ಲೆ ನೀ ಯುಗದ ಜೀವರ ಪುಣ್ಯ
ದೊದವಿಂಗೆ ಕೈಕೊಂಡ ಮೂರ್ತಿಯಿದು ಹುಸಿಯುಮಾ
ಡಿದೆನಾದೊಡುಳಿದ ಮಾನವರ ಪರಿಯ್ಸೆಸಲೇ ಅಲ್ಲಮು
ಪ್ರಭುವೆಯೆನಲು ॥

ಚದುರ ಖಿನ್ನೀ ಸೃಷ್ಟಿಯೋ ಬೇರೆ ಅದಕೆ ಮೆ
ಚ್ಚಿದೆನು ನೀನಿರ್ದುಮಿಲ್ಲೆಂಬ ಬಯಲಿನ ಭ್ರಮೆಯ
ಬೆದರ ಬಿಸುಡೆಂದು ಶಿವಸುಖಗೋಷ್ಠಿಯಿಂದ ಕದಳಿಯ
ಬಟ್ಟೆಗೊಂಡ ಪ್ರಭುವೂ ॥

ಶ್ರೀ ಉದ್ದಾನ ಸಿದ್ಧ ಪುರುಷರ ಪ್ರಸಿದ್ಧವಾದ ತೆರಹಿಲ್ಲದ ಆತ್ಮಶಕ್ತಿ ಸಂಪನ್ಮೂಲವೊಂದೇ ಆಧಾರ.

ಈ ತೆರನಾದ ದಾಸೋಹ ಪ್ರಸಾದ ತುಷ್ಟಿಯನ್ನು ಷೋಡಶೋಪಚಾರಗಳಿಂದ ಇಷ್ಟಲಿಂಗ ದೇವನಿಗರ್ಪಿಸಿ, ಶಿವಧ್ಯಾನ ಮಗ್ನರಾಗಿ ಪವಡಿಸಿ, ಬೆಳಗಿನ ಜಾವ ಕೋಳಿಗಳ ಮೊದಲನೆ ಕೂಗಿನೊಡನೆ ಜಾಗ್ರತರಾಗಿ, ಅರುಣೋದಯದವರೆಗೂ ಶಿವ ಸಾಮ್ರಾಜ್ಯಸುಖ ಲೋಲುಪ್ತರಾಗಿರುವರು. ಇದೇ ಸಮಯದಲ್ಲಿ ಬೆಟ್ಟದ ಮೇಲಿರುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ಮತ್ತು ಶ್ರೀ ಸಿದ್ಧಗಂಗಾಂಬಿಕೆಗೆ, ನಗಾರಿ' ಸಾಪತ್ತು ಘಂಟಾರವ ಮಂಗಳವಾದ್ಯಗಳೊಂದಿಗೆ ಸಂಭ್ರಮದ ಅಭಿಷೇಕಾದಿ ಪೂಜಾಕ್ರಿಯೆಗಳು ಆಗಮೋಕ್ತವಾಗಿ ಗೀತಾಗಾನ ಘೋಷಗಳ ಮಧ್ಯೆ ನಡೆಯುತ್ತಿರುವುವು. ಮಕ್ಕಳು ತಮ್ಮ ಪ್ರಾತಃ ಕರ್ಮಾದಿಗಳನ್ನು ತೀರಿಸಿಕೊಂಡು ಸಿದ್ಧರಾಗಿ, ವೇದ ಮತ್ತು ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಆಚಾರ್ಯರುಗಳ ಸಮ್ಮುಖದಲ್ಲಿ 'ಓಂ ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷ, ಸಹಸ್ರಪಾತ್" ಇತ್ಯಾದಿ ವೇದ ಘೋಷಗಳನ್ನು ಮಾಡುತ್ತ ವ್ಯಾಸಂಗದಲ್ಲಿ ಮಗ್ನರಾಗುವರು. ಈ ಸುಮಾರಿನ ಉಷಃ ಕಾಲದಲ್ಲಿ ಶ್ರೀ ಸ್ವಾಮಿಯು ಸಾತ್ವಿಕಾಹಾರವನ್ನು ಲಿಂಗ ಮುಖಾರ್ಪಿತ ಮಾಡಿ ಸ್ವೀಕರಿಸಿ ಪೂಜಾ ಗೃಹದಿಂದ ಹೊರ ಹೊರಟು ಆವಿಗೆಗಳನ್ನು ಮೆಟ್ಟಿ ಸಾಕ್ಷಾತ್ ಶಿವಲೋಕದಿಂದ ಅವತರಿಸಿ ಬಂಧ ಪ್ರಮಥರಾಗ್ರಣಿಯೋ ಎಂಬಂತೆ ಗಂಭೀರ ಪ್ರಸನ್ನ ಮುಖ ಮುದ್ರಿತರಾಗಿ, ಚಿತ್ತೈಸುತ್ತಿರುವಾಗ ಕೈಕಟ್ಟಿಕೊಂಡು ಕಾದು ನಿಂತಿದ್ದ ದರ್ಶನಾಕಾಂಕ್ಷಿಗಳು ಶ್ರೀಪಾದಕ್ಕೆ ನಮಿಸುತ್ತಿರಲು, ಅವರಿಗೆ ಆಶೀರ್ವದಿಸಿ, ಅವರ ಯೋಗಕ್ಷೇಮವನ್ನು ವಿಚಾರಿಸಿ, ಮಿತವಾಗಿ, ಉಚಿತವಾಗಿ ಅವರೊಡನೆ ಸಂಭಾಷಿಸುತ್ತಾ ತಮ್ಮ ಕಾರ್ಯಾಲಯಕ್ಕೆ ತೆರಳುವರು.

ಅವರು ಕಾರ್ಯಾಲಯದಲ್ಲಿ ಸ್ವಲ್ಪಹೊತ್ತು ಆ ದಿನದಲ್ಲಿ ಮುಖ್ಯವಾಗಿ ಗಮನ ಕೊಡಬೇಕಾದ ವಿಷಯಗಳನ್ನ ಜ್ಞಾಪಕಾರ್ಥವಾಗಿ ಒಂದು ಪಟ್ಟಿಯಲ್ಲಿ ಗುರ್ತಿಸಿ, ನಂತರ ಉಪಾಧ್ಯಾಯರಾಗಿ ಶಾಲೆಗಳಲ್ಲಿ ಒಂದೆರಡು ಗಂಟೆಗಳ ಕಾಲ ಪಾಠ ಪ್ರವಚನಗಳನ್ನು ನಡೆಸಿ, ಪುನಃ ಕಾರ್ಯಾಲಯಕ್ಕೆ ಬಿಜಯಂಗೈದು ಸವ್ಯಸಾಚಿಯಂತೆ ಒಂದಾಗುತ್ತಲೂ ಮತ್ತೊಂದು ಕಾರ್ಯದಲ್ಲಿ ನಿರಂತರವಾಗಿ ತೊಡಗಿರುವುದನ್ನು ನೋಡಿದರೆ, ಅನ್ವರ್ಥ ನಾಮಾಂಕಿತ ದಕ್ಷ ಬ್ರಹ್ಮನೋಪಾದಿಯಂತೆ ತೋರುವರು. ಕಾರ್ಯಾಲಯದ ಹೊರಗೂ, ಒಳಗೂ ಪುರುಷರು, ಸ್ತ್ರೀಯರು ಮಕ್ಕಳಾದಿಯಾಗಿ ಅನೇಕರು ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ ತಾಪತ್ರಯಗಳನ್ನು ಶ್ರೀ ಸ್ವಾಮಿಗಳವರಲ್ಲಿ ಬಿನ್ನವಿಸಿಕೊಂಡು ತಮ್ಮ ತಮ್ಮ ಸಂಸ್ಕಾರಕ್ಕನುಗುಣವಾಗಿ ತೃಪ್ತಿ ಪಡೆಯುವರು. ಇಂಥ ಪರಮ ಯೋಗೀಶ್ವರರನ್ನು ಪಡೆದ ನಾಡು ಧನ್ಯ ●



## ಕಾವ್ಯವಾಹಿನಿ

# ಶ್ರೀ ಶಿವಕುಮಾರಾಷ್ಟಕಂ

—ಪಂಡಿತ ಚನ್ನಪ್ಪ ಎರೇಸೀಮೆ

ಶಾ. ವಿ. ವೃ॥ ಶ್ರೀಮದ್ಭಕ್ತಜನಾಂಬುರಾಶಿ ಶಶಿನಂ ತತ್ತ್ವಾರ್ಥಚಿಂತಾಮಣಿಂ ।
ಶಿಷ್ಯಸ್ತೋಮ ಸುಭಕ್ತಿಪೂಜಿತಪದಂ ಚಿತ್‌ತತ್ತ್ವವಿದ್ವದ್ವಿಭುಂ ।
ನಿತ್ಯಾನಂದ ನಿರಂಜನಾರ್ಯಮನಘಂ ಮುಕ್ತ್ಯಂಗನಾಮಂಡನಂ ।
ವಂದೇ ತೋಂಟದ ಸಿದ್ಧಲಿಂಗಮಮಲಂ ಶ್ರೀ ಯೋಗಸಾರಸ್ವತಂ ॥ ॥೧॥

ಶಾ. ವಿ. ವೃ॥ ಉದ್ದಾನೇಶ್ವರ ಹಸ್ತಪಂಕಜಲಸತ್ ಸಂಭೂತ ಸಂಪನ್ನರಂ ।
ಉದ್ದಾಮಪ್ರತಿಭಾಪ್ರಭಾಗುಣಯುತ ಶ್ರೀ ಶಾಂಕರಾನಂದರಂ ।
ಶ್ರದ್ಧಾಭಕ್ತಿಯ ಸಾರಸತ್ವರೆಸಿಸಿರ್ಪೀ ಭವ್ಯಭಾಗ್ಯಾತ್ಮರಂ ।
ಶುದ್ಧಾತ್ಮಂ ಶಿವಯೋಗಿ ರಾಜವಿಭುವಂ ವಂದೇ ಕುಮಾರೇಶನಂ ॥ ॥೨॥

ಮ. ವಿ. ವೃ॥ ಮೆರೆದಾ ತೋಂಟದ ಸಿದ್ಧಲಿಂಗಯತಿರಾಜಾನ್ವಿತೋರ್ವೀಪ್ರಭರ್ ।
ವರಸಿದ್ಧಂ ಅಟವೀಶ ಶಿಷ್ಯ ಶುಭರುದ್ದಾನೇಶಯೋಗೀಶ್ವರರ್ ।
ವರಶಿಷ್ಯಾಗ್ರಣಿ ಯೋಗಿತಾ ಶಿವಕುಮಾರಾಖ್ಯ ಪ್ರಭಾಪುಂಜರೀ ॥
ಧರೆಯೊಳ್‌ವೆಗ್ಗಳವೆತ್ತು ರಂಜಿಪರಲಾ ! ದಾಸೋಹಸದ್ಭಾವದಿಂ ॥ ॥೩॥

ಶಾ. ವಿ. ವೃ॥ ಪ್ರಾಚೀನರ್ಕಳ ಸತ್ತಪಾದಿ ನಿಧಿಯುಂ ಯುಷ್ಮತ್ತಪೋಭಾಗ್ಯ ಸಾ ।
ಮೀಚೀನ್ಯಪ್ರಖರಪ್ರಭಾವ ಪಟಲಂ ಶ್ರೀ ಕ್ಷೇತ್ರಮಾಹಾತ್ಮ್ಯೆಯಂ ।
ವಾಚಾವರ್ಣಿಸಲಾಗದೆಂದೆನೆ ಮಹದ್ವ್ಯಾಪಾರದಿಂ ಕೂಡಿರಲ್ ।
ತೋಚೀತೇ ! ಶಿವಸಿದ್ಧಭೋ ! ಶಿವಕುಮಾರೇಶಾ ನಿನ್ನಬಲ್‌ಬಲ್ಪದೇಂ ॥ ॥೪॥

ಉ। ಮಾ। ವೃ॥ ಆಣವಮಾಯ ಕಾರ್ಮಿಕ ಮಲಾದಿಗಳಿಂ ಮಿಗೆದೂರಸಾರ್ದು ನಿ ।
ರ್ವಾಣವನಪ್ಪುಗೈದು ವರಲಿಂಗ ಶರೀರದಿ ಭೂಮಿಯಲ್ಲಿ ನೀಂ ।
ಕಾಣುತೆ ಭಕ್ತಕೋಟಿಯ ಮನಂಗಳ ಕಾಳಿಕೆ ಸುಟ್ಟು ಬೋಧೆಯಿಂ ।
ಮಾಣದೆ ಭಾವಿಪರ್ಗೆ ಬಯಲಾಗಿಯೆ ತೋರ್ಪ ಕುಮಾರಯೋಗಿ ಜೈ ॥೫॥

ಚಂ। ಮಾ। ವೃ॥ ಶಿವಕೃಪೆಯಿಂದ ವೀರಶಿವಧರ್ಮದ ಭಾಗ್ಯ ವಿಶೇಷಕೋಟಿಯಿಂ ।
ದವತರಣ ಕ್ರಿಯಾಮುಖದಿ ಲಿಂಗದ ದಿವ್ಯ ಶರೀರವಾಂತು ನೀ ।
ನವನಿಯ ಸಿದ್ಧಗಂಗೆಯ ಸುಪಾವನಭೂಮಿಯ ದೇವಭೂಮಿಯಿಂ ।
ನವಕಮನೀಯಕಂಪ ಪರಪುತ್ತಿರಿದೇಂ ಕಲಿಕಾಲಪುಣ್ಯವೋ ॥ ॥೬॥

ಚಂ। ಮಾ। ವೃ॥ ಕಪಿಲವಶಿಷ್ಠ ಕಣ್ವ ಮುನಿಪೋತ್ತಮ ದಿವ್ಯ ತಪೋವನಂಗಳೊಳ್ ।
ವಿಪಿನದಿಯೆಂತು ಭಾರತದ ಸಂಸ್ಕೃತಿ ವಿದ್ಯೆಯು ಪೆರ್ಚುಗೊಂಡಿತೋ ।
ತಪದ ಪವಿತ್ರಮಪ್ಪ ವರಸಿದ್ಧರ ಗಂಗೆಯಲಂತೆ ಸರ್ವಮುಂ ।
ನಿಪುಣತೆಯಿಂದ ಪೆರ್ಚುತಿಹುದೇನಿದು ಕಾಲದ ಪುಣ್ಯಪುಂಜಮೋ ॥ ॥೭॥

ಕಂದ ॥ ಶಿವಯೋಗಿಯ ಬೀಡಿದು ತಾಂ ।
ಶಿವಲೋಕಂ ಪುಣ್ಯ ಸಿದ್ಧಗಂಗಾಧಾಮಂ ।
ಭವಭಯ ಕುಧರಕೆ ಕುಲಿಶಂ ।
ಶಿವರೂಪಂ ಶಿವಕುಮಾರ ಯೋಗಿಪ್ರವರಂ ॥ ॥೮॥

# ಪ್ರಾಣಿ ಪ್ರಪಂಚದಲ್ಲಿ ಮೊಸಳೆ

—ಪ. ರಾಮಕೃಷ್ಣಶಾಸ್ತ್ರಿ

ಉರಗ ಜಾತಿಗೆ ಸೇರಿರುವ ಮೊಸಳೆ ಜೀವ ವಿಕಾಸ ಪಥದಲ್ಲಿ ಜನ್ಮ ತಳೆದು ಹತ್ತು ಕೋಟಿ ವರ್ಷಗಳೇ ಕಳೆದಿರಬಹುದು. ಉಷ್ಣವಲಯದ ವಿವಿಧ ಭಾಗಗಳಲ್ಲಿ ಪಸರಿಸಿರುವ ಅವುಗಳ ಜಾತಿ ದಕ್ಷಿಣ ಮತ್ತು ಮಧ್ಯ ಆಫ್ರಿಕಾ, ಉತ್ತರ ಆಸ್ಟ್ರೇಲಿಯಾ, ಪರ್ಷಿಯಾ, ಪೆಸಿಫಿಕ್ ಸಾಗರ, ಶಾಂತಸಾಗರ ದ್ವೀಪಗಳು, ಅಮೇರಿಕದ ದಕ್ಷಿಣ ಭಾಗಗಳ ನದಿ ಪಾತಳಿಗಳು, ಸಿಹಿನೀರಿನ ಕಟ್ಟೆಗಳು, ಕೆರೆಗಳಲ್ಲಿ ವಾಸಿಸುತ್ತಿದೆ. ಬಂಗಾಳ ಕೊಲ್ಲಿಯಿಂದ ಆರಂಭಿಸಿ ಚೀನದವರೆಗೆ ಸಮುದ್ರದಲ್ಲಿ ವಾಸಿಸುವ ಮೊಸಳೆಗಳಿವೆ. ಮೊಸಳೆಗೆ ಉಪ್ಪುನೀರೆಂದರೆ ಬಹು ಪ್ರಿಯ.

ಜಲಚರಗಳಲ್ಲಿ ಮೊಸಳೆ ಅತ್ಯಂತ ದೈತ್ಯವಷ್ಟೇ ಅಲ್ಲ ಪರಮ ಕ್ರೂರಿಯೂ ಹೌದು. ಉರಗಗಳಲ್ಲಿ ಬಹು ದೊಡ್ಡ ಧ್ವನಿಯಿಂದ ಕೂಗುವ ಸಾಮರ್ಥ್ಯವಿರುವುದು ಅದಕ್ಕೆ ಮಾತ್ರ. ಈ ಧ್ವನಿ ಡಮರು ಬಾರಿಸಿದಂತಿರುತ್ತದೆ. ಮೊಸಳೆ ಶೀರ ಕುರೂಪಿ, ಗರಗಸದಂತಹ ಹಲ್ಲುಗಳ ಸಾಲು, ತ್ರಿಕೋನ ವಕ್ರಾಕಾರದ ಮುಸುಡಿ, ಚಪ್ಪಟೆಯಾಗಿ ಅಗಲವಾದ ಹೊಟ್ಟೆ, ದೇಹದ ಗಾತ್ರಕ್ಕೆ ಕಿರಿದೆನಿಸುವ ಕಾಲುಗಳು, ಸುಕ್ಕುಗಟ್ಟಿದ ಚರ್ಮ ಅದನ್ನು ಅಂದಗೆಡಿಸಿವೆ.

ಹಳೆಯ ಕಾಲದ ದೈತ್ಯ ಗೌಳಿಗಳ ಪೈಕಿ ಒಂದಾಗಿರುವ ಈ ಮೊಸಳೆಗಳ ಅಸಂಖ್ಯ ಜಾತಿಗಳಲ್ಲಿ ಈಗ ಕಾಣಬರುವ ವರ್ಗ ೨೪ ಮಾತ್ರ. ಆಫ್ರಿಕ, ಭಾರತ ಮತ್ತು ಕೆಲವು ದೂರ ಪ್ರಾಂತಗಳಲ್ಲಿ ಮೊಸಳೆಗಳನ್ನು ದೇವರಂತೆ ಪೂಜಿಸಲಾಗುತ್ತಿದೆ. ಮೊಸಳೆ ದುರ್ಗೆಯ ವಾಹನವೆಂಬ ನಂಬಿಕೆ ಅಜ್ಮೇರ್‌ನಲ್ಲಿದೆ. ಗಂಗಾನದಿಯಲ್ಲಿರುವ ಮೊಸಳೆಗಳಿಗೆ ತಿಂಡಿತಿನಿಸು ನೀಡುವ ಭಕ್ತರನ್ನು ಕಾಣಬಹುದು. ಈಜಿಪ್ಟಿನಲ್ಲಿ ಮೊಸಳೆಯೆಂದರೆ ಮಹಾಪುರುಷ ಸೆಬಕ್‌ನ ಅವತಾರ. ಅಲ್ಲಿ ಸೆಕೆಗಾಲದಲ್ಲಿ ಮೊಸಳೆಗಳು ನೆಲದ ಮೇಲೆ ಬೇಕಾದಂತೆ ಓಡಾಡಿ ಕೈಗೆ ಸಿಕ್ಕಿದ್ದನ್ನೆಲ್ಲಾ ಕಬಳಿಸಿದರೂ ಯಾರೂ ಅಡ್ಡಿ ಮಾಡುವುದಿಲ್ಲ. ಅವು ಕೃಷಿ ಭೂಮಿಗೆ ಬಂದರೆ ಇನ್ನೂ ಶ್ರೇಯಸ್ಕರವಂತೆ.

ಸಾಕಿ, ಪಳಗಿಸಿದರೆ ಮೊಸಳೆಗಳು ಕ್ರೂರತನ ಬಿಟ್ಟು ಸಾಧುವಾಗುವುದನ್ನು ಲಂಡನ್ನಿನ ಪ್ರಾಣಿಪ್ರೇಮಿಗಳು ತೋರಿಸಿಕೊಟ್ಟಿದ್ದಾರೆ. ನ್ಯೂಗಿನಿಯ ಮತ್ತು ಆಫ್ರಿಕದ ವಿಕ್ಟೋರಿಯಾ ಸರೋವರದಲ್ಲಿರುವ ಮೊಸಳೆಗಳ ಬೆನ್ನಮೇಲೆ ಕುಳಿತು ಜಲವಿಹಾರ ಮಾಡಬಹುದು. ಆಫ್ರಿಕದಲ್ಲಿ ಮೊಸಳೆಯನ್ನು ಪೂಜಿಸುತ್ತಾರೆ. ಅದು ಶನಿಯ ಅಪರಾವತಾರವಂತೆ. ಹಿಂದೆ ಅಲ್ಲಿ ಹಳ್ಳಿಗರೊಳಗೆ ನಡೆಯುತ್ತಿದ್ದ ಜಗಳಗಳಿಗೆ ಮೊಸಳೆ ನ್ಯಾಯಾಧೀಶನಾಗಿತ್ತೆನ್ನುತ್ತಾರೆ. ಮಾರಿಸ್‌ನಲ್ಲಿ ಸತ್ತ ಮೊಸಳೆಯನ್ನು ಈಗಲೂ ಧಾರ್ಮಿಕ ವಿಧಿಯಿಂದ ಸಂಸ್ಕರಿಸಲಾಗುತ್ತಿದೆ. ಬೌದ್ಧರಿಗೂ ಮೊಸಳೆ ಆರಾಧ್ಯ ಪ್ರಾಣಿ. ಈಜಿಪ್ಟಿನಲ್ಲಿ ಮೊಸಳೆಗಳ ಇಂತಹ ಅಸಂಖ್ಯ ಸ್ಮಾರಕಗಳಿವೆ. ಕರಾಚಿ ಮತ್ತು ಬೆಲ್ಜಿಯನ್ ಕಾಂಗೊಗಳಲ್ಲಿ ಹುಣ್ಣಿಮೆಯಂದು ಜನಿಸಿದ ಮಕ್ಕಳನ್ನು ಆದಿವಾಸಿಗಳು ಮೊಸಳೆಗೆ ಬಲಿ ಕೊಡುತ್ತಿದ್ದರು. ಪುರಾತನ ಕಾಲದ ರಾಜರು ಕೋಟೆಗಳ ಬಳಿಯ ಕಂದಕಗಳಲ್ಲಿ ಶತ್ರುಗಳು ದಾಟದಂತೆ ಮೊಸಳೆಗಳನ್ನು ಸಾಕುತ್ತಿದ್ದರು.

ದ್ವಿತೀಯ ಜಾಗತಿಕ ಸಮರದ ಅನಂತರ ಮೊಸಳೆಯ ತೊಗಲಿನ ಚಪ್ಪಲಿ, ಕೈಚೀಲ, ಪರ್ಸ್ ಇತ್ಯಾದಿಗಳಿಗೆ ಬೇಡಿಕೆ ಹೆಚ್ಚಿದುದರಿಂದ ಒಂದೇ ಸಮನೆ ಅವುಗಳ ವಧಾಕಾರ್ಯ ಸಾಗಿತು. ಫ್ರಾನ್ಸ್, ಅಮೇರಿಕಗಳಲ್ಲಿ ಒಂದು ಮೊಸಳೆಯ ತೊಗಲಿಗೆ ೩೦೦ ರೂಪಾಯಿ ಬೆಲೆಯಿರುವುದಾದರೆ ಅದರಿಂದ ತಯಾರಾದ ವಸ್ತುಗಳಿಗೆ ಸಾವಿರಾರು ರೂಪಾಯಿ ಕ್ರಯ ಲಭಿಸುತ್ತದೆ. ಇದರಿಂದ ತಯಾರಿಸಿದ ಒಂದು ಕೈಚೀಲದ ಬೆಲೆಯೇ ೧೫೦೦ ರೂಪಾಯಿ! ಹೀಗಾಗಿ ಭರ್ಜಿಗಳಿಂದ, ಗುಂಡೇಟಿನಿಂದ, ವಿಷ ಬೆರೆಸಿದ ಮಾಂಸದ ತುಣುಕುಗಳಿಂದ ಮೊಸಳೆಗಳ ಹತ್ಯೆ ನಡೆಯತೊಡಗಿತು. ಅದನ್ನು ಕೊಂದು, ಅದರ ತೊಗಲು ಸೀಳಿ, ಒಳಗೆ ಸುಣ್ಣ ತುಂಬಿಸಿ ನೀರಿಗೆ ಹಾಕುತ್ತಿದ್ದರು. ಇದನ್ನು ತಿಂದ ಮೊಸಳೆಗಳು ಕೂಡಲೇ ಸಾಯುತ್ತಿದ್ದವು. ಇದರಿಂದ ಆಫ್ರಿಕ ಮತ್ತು ಅಮೇರಿಕಗಳಲ್ಲಿ ಅವುಗಳ ಸಂತತಿ ನಾಮಾವಶೇಷವಾಗುತ್ತಿರುವುದು ಗೋಚರಿಸಿ ಈ ಎರಡೂ ದೇಶಗಳೂ ಮೊಸಳೆ ಬೇಟೆಯನ್ನು ನಿಷೇಧಿಸಿವೆ. ಆದರೂ ಕದ್ದು ಮುಚ್ಚಿ ಮೊಸಳೆಗಳನ್ನು ಕೊಲ್ಲಲಾಗುತ್ತಿದೆ.

ಪ್ರದರ್ಶನಾಲಯಗಳಲ್ಲಿ ಕಾದಿಡುವುದಕ್ಕಾಗಿ ಭಾರೀ ಬೆಲೆ ತೆತ್ತು ಮೊಸಳೆಯ ಶವಗಳನ್ನು ಕೊಳ್ಳುತ್ತಾರೆ. ಮೊಸಳೆಯ ಕೊಬ್ಬಿನಿಂದ ಔಷಧಿಗಳೂ ಶರೀರದ ಮಸ್‌ಗ್ರಾಂಡ್ಸ್ ಭಾಗಗಳಿಂದ ವಿಶಿಷ್ಟ ಸುಗಂಧದ್ರವ್ಯಗಳೂ ತಯಾರಾಗುತ್ತವೆ.

ಬಾಲ ಮತ್ತು ದವಡೆ ಮೊಸಳೆಯ ಎರಡು ಬಲಿಷ್ಟವಾದ ಆಯುಧಗಳು. ಮೊಸಳೆ ಸಿಟ್ಟಿಗೆದ್ದು ಮುಳ್ಳುಮುಳ್ಳಾದ ಬಾಲದಿಂದ ಬೀಸಿ ಬಡಿಯಿತೆಂದರೆ ಪ್ರಾಣಿಗಳ ಮಾತಂತಿರಲಿ, ದೋಣಿಗಳೂ ನುಚ್ಚುನೂರಾಗುತ್ತವೆ. ಬಾಲವನ್ನು ಹರಿಗೋಲಿನಂತೆ ಉಪಯೋಗಿಸಿ ಅದು ವೇಗವಾಗಿ ಈಜಬಲ್ಲದು. ಮೊಸಳೆಯ ಬಲಶಾಲಿ ದವಡೆಯಲ್ಲಿ ೬೮ ಹಲ್ಲುಗಳಿವೆ. ಮೊಸಳೆಗೆ ಎಷ್ಟು ಸಲ ಹಲ್ಲು ಉದುರಿದರೂ ಮತ್ತೆ ಹುಟ್ಟಿಕೊಳ್ಳುತ್ತದೆ. ಹಲ್ಲಿನ ಬೆಳವಣಿಗೆ ನಿಲ್ಲುವುದೆಂದೇ ಇಲ್ಲ. ಬೇಟೆ ಬಾಯಿಯಿಂದ ತಪ್ಪಿಸಿಕೊಂಡು ಹೋಗದಂತೆ ಹಿಡಿಯಲು ಮಾತ್ರ ಈ ಹಲ್ಲುಗಳು ಸಹಾಯಕವೇ ಹೊರತು ಅದರಿಂದ ಜಗಿಯಲಾರದು. ಮೊಸಳೆಯ ಚರ್ಮ ದೇಹಕ್ಕೆ ಉಕ್ಕಿನ ಕವಚದಂತಿದೆ.

ಮೊಸಳೆಯ ಇಡೀ ಶರೀರವನ್ನು ನೀರಿನಲ್ಲಿ ಮುಳುಗಿಸಿದರೂ ಕಣ್ಣು ಮತ್ತು ಮೂಗುಗಳನ್ನು ನೀರಿನಿಂದ ಮೇಲೆ ನಿಲ್ಲಿಸಿ ಶಬ್ದವಾಗದಂತೆ ತೇಲುತ್ತದೆ. ನೀರಿನಲ್ಲಿ ಮುಳುಗಿದರೆ ಕಣ್ಣು, ಮೂಗು, ಕಿವಿಗಳನ್ನು ಒಂದೇ ರೆಪ್ಪೆಯು ಮುಚ್ಚಿಬಿಡುತ್ತದೆ. ಮೊಸಳೆಯ ಕಣ್ಣಿನಲ್ಲಿ ಸಾವಿರಾರು ಹರಳುಗಳಿರುವುದರಿಂದ ರಾತ್ರಿಯ ಮಬ್ಬುಬೆಳಕಿನಲ್ಲೂ ಬೇಟೆಯನ್ನು ಸ್ಪಷ್ಟವಾಗಿ ಅದು ಗುರುತಿಸಬಲ್ಲುದು. ಮೊಸಳೆಯನ್ನು ಸುಲಭವಾಗಿ ಕೊಲ್ಲಬೇಕಾದರೆ ಕಣ್ಣನ್ನು ತಿವಿದು ಕುರುಡಾಗಿಸಬೇಕು. ಮೊಸಳೆಯ ಕಣ್ಣುಗಳಿಂದ ಸದಾ ಕಾಲ ಕಣ್ಣೀರು ಜಿನುಗುತ್ತಲೇ ಇರುವುದರಿಂದ ಕಪಟಿಗಳ ಕಣ್ಣೀರನ್ನು ಮೊಸಳೆ ಕಣ್ಣೀರಿಗೆ ಹೋಲಿಸುವುದುಂಟು.

ಅತ್ಯಂತ ಚಿಕ್ಕ ಶಬ್ದವಾದರೂ ಅದರಿಂದ ಅಪಾಯವನ್ನು ಗುರುತಿಸಬಲ್ಲಂತಹ ಅತಿ ಸೂಕ್ಷ್ಮ ಶ್ರವಣ ಶಕ್ತಿಯಿರುವ ಮೊಸಳೆಯ ಮೆದುಳಿನ ಗಾತ್ರ (ಅಡ್ಡಳತೆಯಲ್ಲಿ) ಎರಡು ಇಂಚಿಗಿಂತಲೂ ಕಮ್ಮಿ! ಅದನ್ನು ಗುಂಡೇಟಿನಿಂದ ಕೊಲ್ಲುವುದಾದರೆ ಮರ್ಮಸ್ಥಾನ ಮೆದುಳೇ.

ಸಿಂಹ, ಹುಲಿ, ಚಿರತೆ ಮತ್ತು ಹಾವು ಇವಿಷ್ಟು ಸೇರಿ ಕೊಲ್ಲದಷ್ಟು ಮನುಷ್ಯರನ್ನು ಕೇವಲ ಮೊಸಳೆಗಳೇ ಪ್ರತಿ ವರ್ಷ ತಿಂದುಬಿಡುತ್ತವೆಯಂತೆ! ಅದರ ನಿತ್ಯ ಆಹಾರ ಮೀನು. ನೀರಿಗೆ ಇಳಿದ ಎಮ್ಮೆ, ಕೋಣಗಳ ತಂಟೆಗೆ ಮಾತ್ರ ಅವು ಹೋಗುವುದಿಲ್ಲ. ಮತ್ತೆ ಆನೆ, ಹುಲಿಗಳಾದರೂ ಮೊಸಳೆಯ ಬಾಯಿಂದ ಪಾರಾಗಲಾರವು. ಆಫ್ರಿಕವೊಂದರಲ್ಲೇ ವರ್ಷಂಪ್ರತಿ ಸಾವಿರ ಜನರು ಮೊಸಳೆಗೆ ತುತ್ತಾಗುತ್ತಾರೆ. ಇವರಲ್ಲಿ ಹೆಂಗಸರು, ಮಕ್ಕಳ ಸಂಖ್ಯೆ ಹೆಚ್ಚು. ಮನುಷ್ಯ ಮಾಂಸದ ರುಚಿ ಹತ್ತಿತೆಂದರೆ ಅದಕ್ಕಾಗಿಯೇ ಹೊಂಚುಹಾಕುತ್ತವೆ. ಗಾಯಗೊಂಡ ಒಂದು ಮೊಸಳೆ ವರ್ಷದಲ್ಲಿ ೧೦ ಸಾವಿರಕ್ಕಿಂತ ಹೆಚ್ಚು ಮಂದಿಯ ಮೇಲೆ ಆಕ್ರಮಣ ಮಾಡಬಲ್ಲುದೆಂದು ಗೊತ್ತಾಗಿದೆ.

ನೀರಿನಲ್ಲಿ ಮಬ್ಬಾದ ಸ್ಥಳವೊಂದರಲ್ಲಿ ಮೊಸಳೆ ಬೇಟೆಗಾಗಿ ಅಡಗಿಕೊಳ್ಳುತ್ತವೆ. ಚಲಿಸುತ್ತಿರುವ ಬೇಟೆಯ ಮೇಲೆ ಅದು ಎರಗುವುದಿಲ್ಲ. ಬೇಟೆ ಅರೆಕ್ಷಣ ನಿಂತರೆ ಸಾಕು, ಬೇಟೆಯ ಮೇಲೇರಗಿ, ಹಲ್ಲುಗಳಿಂದ ಕಚ್ಚಿ, ಬಾಲದಿಂದ ಅಪ್ಪಳಿಸುತ್ತದೆ. ಆ ಏಟಿಗೆ ಕೊಳ್ಳೆ ನಿರ್ಜೀವವಾಗುತ್ತದೆ. ಅದರ ಹಲ್ಲು ೬ ಇಂಚಿಗಿಂತ ದೊಡ್ಡದಾಗಿದ್ದು ಒಳಗೆ ಬಾಗಿಕೊಂಡಿರುವುದರಿಂದ ಅಗಿಯುವಂತಿಲ್ಲ. ಕೊಳ್ಳೆ ಚಿಕ್ಕದಾಗಿದ್ದರೆ ನುಂಗುತ್ತದೆ. ದೊಡ್ಡದಾಗಿದ್ದರೆ ನೀರಿನ ಆಳದಲ್ಲಿರುವ ತನ್ನ ನಿವಾಸಕ್ಕೊಯ್ದು ಕೊಳೆಯಲು ಹಾಕಿ ಕ್ರಮೇಣ ಕೊಂಚ ಕೊಂಚವೇ ತಿನ್ನುವುದು. ಹಲ್ಲಿನಿಂದ ಎಲುಬುಗಳನ್ನು ಚಚ್ಚಿ ಸೀಳಬಲ್ಲುದು.

ಹೊಟ್ಟೆಬಾಕತನ ಮೊಸಳೆಗಿಲ್ಲ. ಆದರೆ ಹೊಟ್ಟೆಯೊಳಗಿರುವ ಹೈಡ್ರೋಕ್ಲೋರಿಕ್ ಆಮ್ಲ ಎಷ್ಟು ತೀಕ್ಷ್ಣವಾಗಿದೆಯೆಂದರೆ ಕೆಲವೊಮ್ಮೆ ಅದು ನುಂಗಿದ ಆಭರಣಗಳೂ ಉಕ್ಕಿನ ಗೋಲಿಗಳೂ ನಿಧಾನವಾಗಿ ಜೀರ್ಣವಾಗುತ್ತವೆ.

ಆಹಾರವನ್ನು ತಿಂದಾಗಲೆಲ್ಲ ಮೊಸಳೆಯ ಹಲ್ಲುಗಳಲ್ಲಿ ಆಹಾರದ ತುಣುಕುಗಳು ಸೇರಿಕೊಂಡು ಬಾಧೆ

ಪಡಿಸುತ್ತವೆ. ಆಗ ಕಡಲಹಕ್ಕಿಗಳು ಅದರ ಬಾಯೊಳಗೆ ಕುಳಿತು ಈ ತುಣುಕುಗಳನ್ನು ಹೊರತೆಗೆಯುತ್ತವೆ. ಅವಕ್ಕೆ ಮೊಸಳೆ ಹಾನಿ ಮಾಡುವುದಿಲ್ಲ. ಯಾರಾದರೂ ಬರುತ್ತಿರುವುದು ಕಂಡರೆ ಹಕ್ಕಿಗಳು ಹಾರಿ ಹೋಗುತ್ತವೆ. ಇದು ಅಪಾಯದ ಸೂಚನೆಯೆಂದರಿತು ಮೊಸಳೆ ನೀರಿನಲ್ಲಿ ಮುಳುಗುತ್ತದೆ.

ಮೊಸಳೆಗಳಲ್ಲಿ ಹೆಣ್ಣೇ ಬಲಶಾಲಿ. ಋತು ಕಾಲದಲ್ಲಿ ಗಂಡನ್ನು ಆಕರ್ಷಿಸಲು ಅದು ತನ್ನ ದೇಹದಿಂದ ವಿಶಿಷ್ಟ ವಾಸನೆಯೊಂದನ್ನು ಹೊರಡಿಸುತ್ತದೆ. ಆಗ ಗಂಡು ತನ್ನ ಗಂಟಲಿನ ಎರಡೂ ಪಕ್ಕಗಳಲ್ಲಿರುವ ಧ್ವನಿಪೆಟ್ಟಿಗೆಯಿಂದ 'ಸಂಗೀತ' ಮೊಳಗಿಸುತ್ತದೆ. ಅವುಗಳ ಮಿಲನ ನೀರಿನಾಳದಲ್ಲಿ ನಡೆಯುತ್ತದೆ. ಒಂದು ಸಾರಿಗೆ ಹೆಣ್ಣು ಮೊಸಳೆ ೩೦ ರಿಂದ ೯೦ ರವರೆಗೆ ಮೊಟ್ಟೆಯಿಡುತ್ತದೆ. ನೀರಿಗೆ ಹೆಚ್ಚು ದೂರವಿಲ್ಲದಂತೆ ಉಸುಬಿನಲ್ಲಿ ಸುಮಾರು ೨ ಅಡಿ ಆಳದ ಹೊಂಡ ತೆಗೆದು ಅದರಲ್ಲಿ ತತ್ತಿಗಳನ್ನಿಟ್ಟು ಮುಚ್ಚುತ್ತದೆ. ಕೆಲವು ಸಲ ತತ್ತಿಗಳನ್ನು ಪೊದೆಗಳಲ್ಲೂ ಬಚ್ಚಿಡುತ್ತದೆ. ತಾಯಿ ಮೊಸಳೆ ನೀರಿನಲ್ಲಿದ್ದುಕೊಂಡೇ ತತ್ತಿಗಳಿಗೆ ಕಾವಲು ನಡೆಸುತ್ತದೆ. ಇಲಿ ಹೆಗ್ಗಣಗಳಿಂದಾರಂಭಿಸಿ ಚಿರತೆ, ಹೆಬ್ಬಾವು, ಮುಂಗುಸಿಗಳು ಕೂಡ ಸುಳಿವು ಸಿಕ್ಕಿದರೆ ತತ್ತಿಗಳನ್ನು ತಿನ್ನದೆ ಬಿಡಲಾರವು.

ಸೂರ್ಯ ಶಾಖದಿಂದ ತತ್ತಿಗಳನ್ನು ಮುಚ್ಚಿದ ಮಳಲು ಕಾದು ಕಾದು, ೩ ತಿಂಗಳಲ್ಲಿ ತತ್ತಿಯೊಡೆದು ಹೊರ ಬರುವ ಮರಿಗಳ ಉದ್ದ ೮ ಇಂಚಿರುತ್ತದೆ. ತತ್ತಿಯೊಡೆದ ತಕ್ಷಣ ಮರಿಗಳ ಕೀಚಲು ಧ್ವನಿ ಕೇಳಿಸುವುದನ್ನೇ ಕಾದು ನಿಂತಿರುವ ತಾಯಿ ತಕ್ಷಣ ಧಾವಿಸಿ ಮಳಲನ್ನು ತೋಡಿ ಮರಿಗಳನ್ನು ಹೊರ ತರುತ್ತದೆ ಆ ಕಾಲದಲ್ಲಿ ಯಾವ ಗಂಡಾಂತರವಿದ್ದರೂ ಅದನ್ನು ಗಣನೆಗೆ ತರಲಾರದೆನ್ನುತ್ತಾರೆ ಪ್ರಾಣಿ ಶಾಸ್ತ್ರಜ್ಞರು. ಮರಿಗಳಿರುವ ಜಾಗಕ್ಕೆ ಉಕ್ಕಿನ ತಂತಿಯ ಬೇಲಿ ಹಾಕಿದರೂ ಅದು ಚೂರು ಚೂರು ಮಾಡಬಲ್ಲದು.

ಹುಟ್ಟುವಾಗ ಮರಿಗಳಿಗೆ ಅಂಡ ದಂತಗಳಿದ್ದು ಕೆಲವು ಸಮಯದಲ್ಲಿ ಉದುರಿ ಹೋಗುತ್ತವೆ. ಈ ದುರ್ಬಲ ಮರಿಗಳು ತೆವಳಿಕೊಂಡೇ ನೀರಿಗೆ ಸಾಗಬೇಕು ಆಗ ಕಾಲೂ ಬಲಿತಿರುವುದಿಲ್ಲವಾದ್ದರಿಂದ ಸುಲಭವಾಗಿ ಹದ್ದು, ಕೊಕ್ಕರೆ ಮುಂತಾದ ಶತ್ರುಗಳ ಬಾಯಿಗೆ ಬೀಳುತ್ತವೆ. ಬದುಕಿ ಉಳಿಯುವ ಮರಿ ಎಲ್ಲೋ ನೂರರಲ್ಲಿ ಒಂದು ಮಾತ್ರ. ಆದರೆ ಜೀವನವಿಡೀ ಬೆಳೆಯುತ್ತಲೇ ಇರುವ ಮೊಸಳೆ ವರ್ಷಕ್ಕೆ ಒಂದು ಅಡಿಯಂತೆ ೨೦ ರಿಂದ ೩೦ ಅಡಿ ಉದ್ದ ಬೆಳೆಯುತ್ತವೆ. ೩ ಟನ್ ಭಾರವೂ ಇರುತ್ತವೆ. ಮೊಸಳೆಗಳು ಶತಾಯುಷಿಗಳೆಂದು ಹೇಳುವರಾದರೂ ೫೦-೬೦ ಕ್ಕಿಂತ ಹೆಚ್ಚು ವರ್ಷ ಬದುಕಿರುವುದಿಲ್ಲ. ಮೃಗಾಲಯಗಳಲ್ಲಿ ಪರಮಾವಧಿ 40 ವರ್ಷ ಬದುಕುತ್ತವೆ. ಜಗತ್ತಿನಲ್ಲೇ ಶ್ರೇಷ್ಠ ಜಾತಿಯವೆನಿಸಿರುವ ಆಫ್ರಿಕದ ನೈಲ್ ನದಿ ತೀರದ ಮೊಸಳೆಗಳು ೧೯ ಅಡಿಗಿಂತ ಹೆಚ್ಚು ಬೆಳೆಯುವುದಿಲ್ಲ. ಇಲ್ಲಿನ ಮೊಸಳೆಗಳ ತತ್ತಿಗಳಿಗೆ ಒಂದು ಬಗೆಯ ಮೀನಿನ ವಾಸನೆಯಿರುವುದರಿಂದ ಅದನ್ನು ಹೆಚ್ಚಾಗಿ ಮನುಷ್ಯರೂ ತಿನ್ನುತ್ತಾರೆ.

ಬ್ರಿಟಿಷ್ ಮ್ಯೂಸಿಯಂನಲ್ಲಿ ೩೦ ಅಡಿ ಉದ್ದ ೧೩ ಅಡಿ- ೮ ಇಂಚು ಸುತ್ತಳತೆಯಿರುವ ಮೊಸಳೆಯ ಅಸ್ಥಿ ಪಂಜರವೊಂದಿದೆ. ಜಗತ್ತಿನಲ್ಲೆ ಮೊಸಳೆಗಳ ದೊಡ್ಡ ಆಗರ ಉಗಾಂಡದ ದಕ್ಷಿಣಕ್ಕಿರುವ ವಿಕ್ಟೋರಿಯಾ ಜಲಪಾತ. ನೀರಿನಲ್ಲಿಯೂ ತೀರದಲ್ಲಿಯೂ ಒಂದರ ಮೇಲೊಂದು ಬಿದ್ದು ಹೊರಳಾಡುತ್ತಿರುವ ಸಹಸ್ರಾರು ಮೊಸಳೆಗಳ ದೃಶ್ಯ ಇಲ್ಲಿ ಸಾಮಾನ್ಯ. ಮುದಿಯಾಗಿ ಸತ್ತ ಮೊಸಳೆಗಳ ರಾಸಿಯೇ ಅಲ್ಲಿದೆ. ಆದರೆ ಮೊಸಳೆಗಳ ಬೇಟೆಗೆ ಆಸ್ಪದವಿಲ್ಲ.

ಮೊಸಳೆ ಮರಿ ಎಷ್ಟು ಚಿಕ್ಕದಾಗಿದ್ದರೂ ಸುತ್ತಲಿನ ಜೀವಿಗಳ ಮೇಲೆ ಆಕ್ರಮಣ ಮಾಡದೆ ಬಿಡಲಾರದು. ಮರಳಿನಲ್ಲೂ ನೀರಿನಲ್ಲೂ ತೆವಳುವ ಮೊಸಳೆಗೆ ಗಾಬರಿಯಾದರೆ ೪ ಕಾಲಿನಲ್ಲಿ ಓಡುವುದೂ ಉಂಟು. ●





# ಸರಯೂ ಮತ್ತು ಅವನು (ಕಥೆ)

—ಕಮಲ ಹೆಮ್ಮಿಗೆ

''ನಾಳೆ ಮೀಟಿಂಗಿದೆ ನಾಕೂವರೆಗೆ ನೀವು ಯಾಕೆ ಬರಬಾರದು'' ಅಂದಿದ್ದ ಅವನು. 'ನೋಡುವ' ತಾನೆಂದಿದ್ದಳು. "ಅನೇಕ ಸಾರೆ ಅಂದ ಹಾಗೆ." ಅವನು ನಕ್ಕ '' ಆದರೆ.... Try ಮಾಡಿ, ಆಯಿತೆ '' ಎಂದವನೆ ಎದ್ದ, ಕಾಂಪೌಂಡಿನ ಹೊರಗೆ ನಿಲ್ಲಿಸಿದ್ದ ಸೈಕಲ್ ತಳ್ಳಿಕೊಂಡು ರಸ್ತೆ ಸವೆಸುತ್ತ ಹೊರಟ.

ಸರಯೂ, ವಿಚಾರ ಮಾಡುತ್ತಾ ನಿಧಾನವಾಗಿ ಬಾಗಿಲೊಳಕ್ಕೆ ಬಂದು ಸೋಫಾ ಮೇಲೆ ಕೂತಳು. ಅಪ್ಪ ಗುರುಗುಡುತ್ತ ರೂಮಿನಲ್ಲಿ ಹಾಸಿಗೆ ಹಾಸುತ್ತಿದ್ದುದು ಕೇಳುತ್ತಿತ್ತು. ಇವರು ಯಾವಾಗಲೂ ಹೀಗೇ- ಎಂಟೂವರೆಗೆಲ್ಲ ಊಟ ಮುಗಿಸಿ ಮಸ್ಕಿಟೋ ಕರ್ಟನ್ನಿನೊಳಗೆ ಸೇರಿಬಿಡುತ್ತಾರೆ. ಜೋರು ಮಾತಾಡುವಂತಿಲ್ಲ. ರೇಡಿಯೋ ಕೇಳುವ ಹಾಗಿಲ್ಲ.

ತಂಗಿ, ವರಾಂಡದಲ್ಲಿ ಹೈಡ್ರಾ-ಪುರಾಣ ಉರು ಹಚ್ಚುತ್ತಿದ್ದಳು. ಕನ್ನಡಕ ಒರೆಸಿ ಮತ್ತೆ ಏರಿಸಿ.

ಸ್ವಲ್ಪ ತುಂಟಿಯಾದ ಅವಳು ಅಮ್ಮನೊಂದಿಗೆ ಅಡಿಗೆ ಮನೆಯಲ್ಲಿ ಓಡಾಡುತ್ತ ತಮಾಷೆಮಾಡುತ್ತ, ಇರುತ್ತಾಳೆ-ಖುಷಿಯಲ್ಲಿ. ಬೀದಿಯಲ್ಲಿ ಎದೆ ಮೇಲೆ ಪುಸ್ತಕ ಒರಗಿಸಿ ಕೊಂಚ ಗೂನುತ್ತ ಓಡಾಡುವ ಇವಳು ತನಗೆ ತಿಳಿದಷ್ಟೆ ನಿಜವೆ ?

ಸರಯೂ ನಕ್ಕಳು. ತಾನಿಷ್ಟು ಸೀರಿಯೆಸ್ಸಾಗಿ ವಿಚಾರ ಮಾಡುತ್ತಿರುವುದು ಅಮ್ಮನಿಗೆ ಹೇಗೆ ಗೊತ್ತಾದೀತು ? "ಸುಮ್ಮನೆ ಕೂತವರು ಕೂತಲ್ಲೆ. ಇದೇನು ದಿವಾನರ ಮನೆಯೆ" ಅನ್ನುತ್ತಾಳೆ. ಆಗೆಲ್ಲ ಸರಯೂಳ ಹಾಡು ಜೋರಾಗುತ್ತದೆ. 'ಕುಛ್ ತೋ ಲೋಗ್ ಕಹೇಂಗೇ' ಇತ್ಯಾದಿ, ಇತ್ಯಾದಿ.

ರೂಮಿಂದ ಸಿಡಿಲ ಹಾಗೆ ಬೆಚ್ಚಿಸಿತು ಅಪ್ಪನ ಧ್ವನಿ "ಆ ಮಾದಿಗರೋನು ಕುಡಿದ ಕಾಫೀ ಲೋಟ ಯಾರೇ ತೊಳೆಯುವವರು ?" ಸರಯೂ ದಿಗಿಲ್ಲನೆ ಎದ್ದಳು. ಲೋಟ ಗಲಬರಿಸಿ ಮತ್ತೆ ಬಂದಳು. ಕಣ್ಣೊಳಗೆ ಉರಿ ಆಯಿತು. ಕಣ್ಣೀರು ಇಂಗಿರಬೇಕು. ನಿಜ ....ನಿಜ. ತಾಯಿ ಆಗಾಗ ಅನ್ನುತ್ತಲೇ ಇರುತ್ತಾಳೆ. ಅವನು ಪುಂಡನಂತೆ. ರೌಡಿಯಂತೆ !

ಎದುರು ಮನೆ ಲೆಕ್ಚರರ್ ತನಗ, ಅವನಿಗೆ, ಇಬ್ಬರಿಗೂ ಮೇಷ್ಟರು. ಇಂಟರ್ನಲ್ ಅಸೆಸ್‌ಮೆಂಟ್ ಮಾರ್ಕ್ಸ್ ಕೂಡಾ ಅವರ ಕೈಲಿದೆ. ಅವನು ಸ್ಟ್ರೈಕಿನ ಲೀಡರ್, ಹಾಜರಾತಿ ಕಡಿಮೆ ಬೇರೆ. ಇಂಟರ್ನಲ್ ಅಸೆಸ್‌ಮೆಂಟ್ ನಲವತ್ತಕ್ಕಿಂತ ಏರಿಲ್ಲ. ಇಷ್ಟು ಸಾಲದೇ ಅವನು ಪುಂಡನೆಂದು ತೀರ್ಮಾನಿಸಲು ! ಏನೇ ಇರಲಿ "He is a good friend of Mine." ಎಂದು ಹೆಮ್ಮೆ ಪಟ್ಟಳು ಆಕೆ. ಒಮ್ಮೆ ಕ್ಯಾಂಟೀನಿನಲ್ಲಿ ಕೂತಾಗ್ಗೆ ಆಕೆ ಅಂದಿದ್ದಳು. "ನನಗೆ ಕೇರಳೀಯರು ತುಂಬ ಇಷ್ಟಾಪ್ಪ ಕಾಫಿ ಕಪ್ಪಲ್ಲಿ ಮುಳುಗಿದ್ದ ಅವನು ಜಿಬರೆಗಣ್ಣೆತ್ತಿ ನೋಡಿದ್ದ. ಆಮೇಲೆ ಅವನು ಮೇಲಿಂದ ಮೇಲೆ ಬರುವುದು, ಕ್ರಾಂತಿ ಬಗ್ಗೆ ಮಾತಾಡುವುದು, ಕರಪತ್ರಗಳನ್ನು ಕೊಡುವುದು ರೂಢಿ ಆಯಿತು. ಬಂದಾಗತಾನೆ ವಿಶೇಷ ಉಂಟೆ ? ಏನಿಲ್ಲ. ಎದುರು ಕೂತಿರುವುದು, ಪೇಪರ್ ತಿರುವುವುದು. ಆಗೆಲ್ಲ ಅವನ ಚೂರಿ ಅಲುಗಿನ ಹಾಗೆ ಚೂಪಾದ ನಾಲಿಗೆಯನ್ನೂ, ಒರಟು-ಎಣ್ಣೆ ಕಾಣದ ಕೂದಲನ್ನೂ ಮಾಸಿದ ಬಿಸ್ಕತ್ ಬಣ್ಣದ ಗುರು ಶರ್ಟನ್ನೂ, ನೋಡುತ್ತಾ ಸರಯೂ ಕೂಡುತ್ತಿದ್ದಳು.

ಇಂಥಲ್ಲಿ ಮೀಟಿಂಗಿದೆ, ಸ್ಟ್ರೈಕು ಹೀಗಾಗಬೇಕು. ಇತ್ಯಾದಿಯಾತ ವಿವರಿಸುತ್ತಿರುವಾಗ ಸರಯೂ ತಲೆ ಕಾಣಿಸುತ್ತಿದ್ದಳು. ವರಾಂಡದಲ್ಲಿ ಇಡುಗಿದ ಅವನ ಸಿಗರೇಟು ವಾಸನೆ ಅವಳಿಗೆ ಹಿತವೆನಿಸುತ್ತಿತ್ತು.

ಹೀಗೆ ಒಮ್ಮೆ ಸಂಜೆ ಅವನು ಬಂದಿದ್ದ, ತುಂಬ ತಮಾಷೆ ಮೂಡಲಿದ್ದ. ಅವಳಿಗೆ ಆಶ್ಚರ್ಯ. ಅವನು ಮಾಮೂಲಿನಂತೆ ಸಿಗರೇಟು ಹಚ್ಚಿ ಹೊಗೆ ಉಂಗುರುಗಳಲ್ಲಿ ಮುಳುಗಿದ್ದ. ಥಟ್ಟನೆ ಬಿಳಿ ಹಲ್ಲು ಕಾಣುವಂತೆ ನಕ್ಕು 'ಸಿಗರೇಟ್ ?' ಎಂದ. ಸರಯೂಗೆ ತೆಗೆದುಕೊಳ್ಳೋಣ ಅನಿಸಿಬಿಟ್ಟಿತು. 'Try ಮಾಡಿ ಬ್ರಿಸ್ಟಲ್‌ಗಿಂತ ವಿಲ್ಸ್ ಚಂದ ನೋಡಿ' ಅಂದು ನಕ್ಕ. ಸರಯೂಗೆ ಹುಡುಗಾಟಿಕೆ Mood ಹೋಗಿ, ಅತ್ತಿತ್ತ ಕಣ್ಣಾಡಿಸಿದಳು

ಆಗಾಗ್ಗೆ ಈ ಕಡೆ ಕಿವಿತಿರುಗಿಸುತ್ತಿದ್ದ ತಂಗಿ ಏನಾದರೂ ತಮ್ಮ ಸಂಭಾಷಣೆ ಕೇಳಿಸಿಕೊಂಡು ಬಿಟ್ಟಳೊ!

ಆ ದಿನ ಅವನು ಹೋದ ನಂತರ ಅಮ್ಮ ಗೊಣಗಿದ್ದಳು. "ಏನು ತಲೆಹರಟೆ ಹುಡುಗರೋ, ಘನವಿಲ್ಲ, ಗಂಭೀರವಿಲ್ಲ."

ಹೀಗೇ ಯೋಚಿಸಿಕೊಳ್ಳುತ್ತ ಸರಯೂ ಎದ್ದು ಬಡಿಸಿಕೊಂಡು ಉಂಡಳು. ಹಾಸಿಗೆ ಉರುಳಿಸಿ ಬೋರಲಾಗಿ ಬಿದ್ದುಕೊಂಡು ಲೈಟು ಆರಿಸಿದಳು.

ಈ ಸಂಜೆ ಅವಳಿಗೆ ಸ್ವಲ್ಪ ಬೇಜಾರಾಗಿತ್ತು. ಅವನು ಮಾತಾಡುತ್ತಾ ಅಂದಿದ್ದ. "ಈ ವರ್ಷ ಓದೋದು ಕಷ್ಟರೀ, ಕೆಲಸ ಸಿಕ್ಕರೆ ಇದಕ್ಕೆ ಕೈ ಮುಗಿಯಬಹುದು ಬಹುಶಃ. ಯಾರಿಗೆ ಬೇಕು, ಪ್ರೊಫೆಸರಿಗೆ ಓ. ಸಿ. ಹೊಡೆಯುವುದು, ಪರಾಕು ಹಾಡುವುದು." ಹಾಗೆಂದು ಕುರ್ಚಿಗಂಟಿದ್ದ ಅವಳನ್ನೇ ನೋಡಿದ್ದ. ಸಂಬಂಧಗಳ ಪೈಕಿ, ನಿಮಗೆ ಯಾವುದು ಉತ್ಕಟ ಅನಿಸುತ್ತೇರೀ? ಅಂದ ಥಟ್ಟನೆ. ಪುಟ್ಟವಳ ಹಾಗೆ ಅಭಿನಯಿಸುತ್ತ ಸರಯೂ 'ಗೊತ್ತಿಲ್ರಿ' ಅಂದಿದ್ದಳು. ಬೆಳ್ಳಗೆ ನಕ್ಕ ಅವನು ತಿರುಗಿ ಕಠ್ರಗಾಗಿದ್ದ. ಸೈಕಲ್ಲು ತಳ್ಳಿಕೊಂಡು ಕತ್ತಲಲ್ಲಿ ಇಂಗಿಹೋದ.

ಯಾಕೋ ಎದೆ ತುದಿಯಲ್ಲಿ ಏನೋ ಮುಳ್ಳು ಗುಟ್ಟಿದ ಹಾಗಾಗಿ ಸರಯೂಗೆ ಕಸಿವಿಸಿ ಆಯಿತು. ಅವನ:—ಅವನ ನಗೆ, ಅವನ ಬೀಸು ನಡಿಗೆ, ನಾಲಿಗೆ ಎಲ್ಲ ತನಗೆ ಬೇಡವೆ?

ಸರಯೂ ಮರುದಿನ ಎದ್ದಾಗ ಭೀಕರ ಮೌನ ಅವಳನ್ನು ಸುಡುತ್ತಿತ್ತು. ಅವರ ಮನೆಯಲ್ಲಿ ಹಾಗೆ. ಬೇಗ ಉಂಡು, ಕಾಲೇಜಿಗೆ ಹೊರಟು ಅವನು ಬರುವುದನ್ನೆ ಕಾದುನಿಲ್ಲುವುದು ಅವಳ ಗುರಿಯಾದ್ದರಿಂದ ಏನನ್ನು ಲಕ್ಷಿಸಲಿಲ್ಲ. ಆಕೆ, ಬಸ್‌ಸ್ಟಾಪಿನಲ್ಲಿ ಸೆರಗು ಹಾರಿಸುತ್ತಿರುವಾಗ ದೂರದಲ್ಲಿ ಅವನು, ಅವನ Eastern star ಸೈಕಲ್ ಕಣ್ಣಿಗೆ ಕಂಡಂತಾಯಿತು. ಖುಷಿಯಾದಂತೆ ತೋರಗೊಡದೆ 'ಇವತ್ತು ಕಾಲೇಜು ಬೋರಪ್ಪ. ಹೀಗೇ ನಡೆಯುತ್ತ ಏರಿ ಹತ್ತಿರ ಹೋಗೋಣ ಅಂದಳು. ಅವನು ನಕ್ಕ, ಕ್ರಾಸಲ್ಲಿ ಬೆರಳು ತೂರಿಸಿ, 'ನಡೀರಿ' ಎಂದವ ತೋಳು ಬೀಸುತ್ತ ಹೊರಟ, ಅವನ ಬದಿಗೆ ಅವಳು.

ಏರಿಯ ಬಳಿ ಮರಕ್ಕೆ ಸೈಕಲ್ಲೊರಗಿಸಿ ಅವನು ಅವಳಿಂದ ಸ್ವಲ್ಪ ಅಂತರದಲ್ಲಿ ಕೂತ. ಒಳ್ಳೆಯ ಗಂಡು ಧ್ವನಿಯಲ್ಲಿ ಹಾಡು ಗುನುಗುತ್ತಿದ್ದ. ಆಕೆ 'ವಿಲ್ಸ್ ಇಲ್ಲ' ಅಂದು ನಕ್ಕಳು. ಅವನು 'ಇದೆ. ಆದರೆ ನಿಮಗೆ ಕೊಟ್ಟು ನೋಡಲಾರೆ' ಅಂದ ನಾಟಕೀಯವಾಗಿ. 'ಹುಡುಗಿಯರು ಹೂಮುಡಿದು ಗಮಗಮ ಅಂತಲೇ ಇರಬೇಕು!' ಅಂದುದಕ್ಕೆ 'ಹೌದಪ್ಪ ಹುಡುಗರಿಗೆ ಝುಮರ್ಝುಮು, ಅಂತ ಅವಳು, ಜೋಡಿಸಿದಾಗ ಇಬ್ಬರೂ ನಗುವುದಲ್ಲದೆ ಬೇರೇನು ಸಾಧ್ಯವಿತ್ತು?

ಆದರೂ ಆಶೆಗೆ ಅವಳು, ಅವನು ಹಚ್ಚಿಕೊಟ್ಟಿದ್ದ, ಒಂದು ಬಾರಿ ಎಳೆದು ಬಿಸಾಡಿಬಿಟ್ಟಳು. ಹೊಗೆ ಹೋಯಿತೊ ಬಿಟ್ಟಿತೊ ಅವಳಿಗಂತೂ ಸಾಹಸ ಮಾಡಿದ ಖುಶಿಯಾಯಿತು. ಅವನು ಏರಿ ನೀರನ್ನೇ ಹೀರುವಹಾಗೆ ನೋಡುತ್ತಿದ್ದ. ಇದ್ದಕ್ಕಿದ್ದ ಹಾಗೆ 'ಸರಯೂ! ಇವತ್ತು ಬೆಳಿಗ್ಗೆನೇ ಪ್ರೊಫೆಸರ್ ಕರೆಸಿದ್ದರು ಗೊತ್ತ—ಅಂದ. ಯಾಕೆನ್ನುವ ಹಾಗೆ ಅವಳಿದ್ದಳು. ಮುಂದುವರಿಸಿದ. ತುಂಬ ಬ್ರಿಸ್ಕಾಗಿ ಮಾತಾಡಿದರು ರೀ ಈ ಕ್ಕೊಳ್ಳಿ ಅನುಭವದಲ್ಲಿ, ವಯಸ್ಸಲ್ಲಿ ನಾನು ದೊಡ್ಡವನು. ನಿಮಗೆ ಒಳ್ಳೆಯದಕ್ಕೇ ಹೇಳೋದು. ಆ X ಡಿಪಾರ್ಟ್‌ಮೆಂಟಿನ ಸೀಟು ಪ್ರಕರಣನಾ. ನೀವು ಯಾಕೆ ಎಳೆದಾಡುತ್ತೀರಿ, ಪರೀಕ್ಷೆ ಬೇರೆ ಬಂತು. ನಿಮಗೆ Attendance ಕೂಡ ಕಡಿಮೆ ಬಂದಿದೆ. ಯಾಕೆ ಹೇಳಿದೆ ಅಂದರೆ... ಅವನು ಅವರ ಹಾಗೇ ತಲೆಸವರಿಕೊಳ್ಳುತ್ತ ಮುಂದುವರಿಸಿದ "ಅಂದರೆ....ನೀವು ಪ್ರತಿಭಾವಂತರು, ಮುಂದೆ ಬರಬೇಕಾದವರು." ಹಾಗನ್ನುತ್ತಿದ್ದಂತೆ ಅವನು "ನಾನಿನ್ನು ಬರ್ತೀನೆ ಸಾರ್ ಅಂದವನೇ ಸರಭರ ರೂಮಿಂದ ಹೊರಬಂದುಬಿಟ್ಟನಂತೆ. ಅವನು ಕಣ್ಣು ಕಿರಿದುಮಾಡಿ ಹೇಳಿದ. "ಸರಯೂ ಓದೋದು, ಆ ತಲೆತಿರುಕ ಪ್ರೊಫೆಸರ್, ಎಲ್ಲ ರೋಸಿಹೋಗಿದೆ ರೀ, ಬುಲ್ಡೋಜರ್ ತಳದ ಕಲ್ಲುಮಣ್ಣಿನ ಹಾಗೆ ನಾವು ತೆಳ್ಳಗಾಗೋದು, ಪುಡಿಯಾಗೋದು ಅಸಹ್ಯ ಅನಿಸ್ತಿದೆ ರೀ. ನಮಗೆ ಕತ್ತಲೆ ಕತ್ತರಿಸಲಿಕ್ಕೆ ಬೆಳ್ಳಿ ಕತ್ತಿ ಬೇಕು ರೀ". ಹೀಗೆ ಚೂಪಾಗಿ ಕುದ್ದುಕೊಳ್ಳುತ್ತ, ಹೊತ್ತಿ ಉರಿಯುತ್ತ ಮಾತಾಡಿದ.

ಸರಯೂ ಆಶ್ಚರ್ಯದಿಂದ, ನೋವಿನಿಂದ ಕೇಳುತ್ತ ಕೂತವಳು ಹೇಳಿದಳು "ನಾನು ಮಂಜು ಕರಗೋದೆ ಕಾಯ್ತೀನಿ. ನನಗೆ ಬೆಳ್ಳಿ ಕತ್ತಿ ಬೇಡ'. ತಕ್ಷಣ" ಯಾಕೋ ಗಾಜಿನ ಮಣಿಗಳ ಹಾಗೆ ಪಳ....ಪಳ ಕಣ್ಣೀರು ಅವನು ದೂರ ಕೂತವನು ಒಂದಿಂಚು ಕದಲಿ ಹೇಳಿದ "ಹೌದು....ನೋವಾಗುತ್ತೆ. ಆದರೆ ನೀವಿಷ್ಟು Sentiniental ಆಗಬಾರದು ಸರಯೂ"

ಅವಳು ಅಳುವುದೆಲ್ಲ ಮುಗಿಯುವವರೆಗು ಅವನು ಹಾಗೇ ಕೂತಿದ್ದ. ಅವಳು ತಲೆ ಎತ್ತಿದಳು. ಕರ್ಚೀಫ್ ತೆಗೆದು ಒದರಿದಳು. 'ಇನ್ನು ಬರೋಣ್ವ' ಅಂದಳು. ಅವನು, ಅವಳಿಂದ ಸ್ವಲ್ಪ ದೂರದಲ್ಲಿ ಸಿಗರೇಟು ಹಚ್ಚಿ ಪುಸು....ಪುಸು....ಹೊಗೆಬಿಡುತ್ತ ಸೈಕಲ್ ತಳ್ಳುತ್ತ ಬರುತ್ತಿರುವಂತೆ ಇವಳು ಕಣ್ಣು ಕಿರಿದುಗೊಳಿಸಿ ಇಂಜನ್ನಿನ ಹಾಗೆ ಹೊಗೆ ಬಿಡುವ ಅವನ ಒರಟುತನವನ್ನೇ —ಗಮನಿಸುತ್ತ, ಬಹುಶಃ ಮೆಚ್ಚುತ್ತ ಇರುವಂತೆ, ಬಿಸಿಲು ಅವರನ್ನು ಹುರಿಯಿತು.

---

## ವಿದ್ಯಾರ್ಥಿ ಜೀವನದಲ್ಲಿ

—ಎಸ್. ಶಿವರುದ್ರಯ್ಯ

ಸಂಜೆ ಮುಂಜಾವಿನಲಿ ಕಣ್ಣ ಮುನ್ನಂಚೆಯಲಿ
ದೂರ ತೀರದಲಿ
ಕೋಟಿ ನಕ್ಷತ್ರದೀಪದಿಯ ಬೆಳಕ ಕಂಡೆ ॥
ಎಲ್ಲಿ ನಿಂತಿಹೆ ಎಲ್ಲಿ ಎಲ್ಲಿ ನೋಡಿದೆ ಎಲ್ಲಿ
ನೀನಿರುವುದೆಲ್ಲಿ ಏನು ಗೈಯಲು ಬಂದೆ ಏಕಿರುವೆ ಇಲ್ಲಿ
ಕೋಟಿ ನಕ್ಷತ್ರದೀಪದಿಯು ಬೆಳಕೆಲ್ಲಿ ॥
ಇಲ್ಲಿಹೆನು ಇಲ್ಲೇ ಜ್ಞಾನಭಾರತಿಯಲ್ಲಿ ಸ್ವಲ್ಪ ದೂರದಲಿ
ಉತ್ತರವ ಕೊಡಬಲ್ಲೆ ಮಲತಳ್ಳಿಯಲ್ಲಿ।
ಗೈವುದಿದೆ ಗೆಯ್ಮೆಯದು ಸಾಗರದ ಸದೃಶವು
ಸಾಧನೆಯು ಕಿಂಚಿತ್ತು ಯೋಜನೆಯು ಬೃಹತ್ತು
ಕುಂಟು ಕುಂಟುತಲಿ ಸಾಗುತಿದೆ ಆದರ ದೂರ ॥
ನೋಡಿದೆನು ಇಲ್ಲೆ ಹತ್ತಿರದಲ್ಲಿ
ಜ್ಞಾನಭಾರತಿಯಲ್ಲಿ ಮಂಡಿಸಿಹ ಬಂಡೆಯಲ್ಲಿ।
ಕರ್ನಾಟಕ ಸಂಸ್ಕೃತಿಗೆ ಕಳಸ
ವಿಟ್ಟಂತಿಹುದು ಬೆಂಗಳೂರು ನಗರ ॥
ಜ್ಞಾನ ವಿಜ್ಞಾನದೈಸಿರಿಯಾಗಿ
ಲಕ್ಷೋಪಲಕ್ಷ ಜನ ಕಿಕ್ಕಿರಿದು ತುಂಬಿ
ಎಲ್ಲಿ ನೋಡಿದರಲ್ಲಿ ಗಗನ ಚುಂಬಿತ ಸೌದ
ಅಲ್ಲಿಯದೇ ಈ ಬೆಳಕು ಕೋಟಿ ನಕ್ಷತ್ರದೀಪದಿಯ ಬೆಳಕು ॥

---

## ಸಾದರ ಸ್ವೀಕಾರ

೧) ದೊಡ್ಡಮೇಟಿ ಅಂದಾನಪ್ಪನವರು
ಲೇ : ಜ್ಞಾನದೇವ ದೊಡ್ಡಮೇಟಿ.

೨) ಗುಬ್ಬಿ ತೋಟದಪ್ಪನವರು
ಲೇ : ಆರ್. ರಾಚಪ್ಪ

೩) ಸರದಾರ ವೀರನಗೌಡರು
ಲೇ : ಶಾಂತಾದೇವಿ ಮಾಳವಾಡ.

೪) ಹಳಕಟ್ಟಿ ಫಕೀರಪ್ಪನವರು
ಲೇ : ಪ್ರೊ. ಸಂಗಮನಾಥ ಹಂಡಿ.

೫) ಬಸರೀಗಿಡದ ವೀರಪ್ಪನವರು.
ಲೇ : ಶಾಂತರಸ.

ಸೈಜು : ಪ್ರತಿಹೊತ್ತಗೆಯು ಪುಲ್‌ಸ್ಕೇಪ್ 1/8 ಆಕಾರ
ಬೆಲೆ : ಪ್ರತಿಹೊತ್ತಗೆಗೆ 1–50 ಪೈ ಮಾತ್ರ.
ಪ್ರಕಾಶನ : ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ
ಸಂಸ್ಥಾನ ಮಠ — ಗದಗ.

ಸಮಾಜಕ್ಕಾಗಿ ದುಡಿದು ತಮ್ಮ ಬದುಕನ್ನು ಮುಡುಪಿಟ್ಟು ಸಂದುಹೋದ ಪುಣ್ಯಪುರುಷರನ್ನು ನೆನೆವುದು ಆಯಾ ಸಮಾಜದ ಕರ್ತವ್ಯ ಮತ್ತು ಸೌಜನ್ಯ ಈ ದಿಸೆಯಲ್ಲಿ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ 'ವೀರಶೈವ ಸಂಸ್ಥೆ' ಸ್ತುತ್ಯವಾದ ಕಾರ್ಯದಲ್ಲಿ ಮುನ್ನಡೆದಿದೆ. 19–20 ನೆಯ ಶತಮಾನಗಳಲ್ಲಿ ಬಾಳಿದ ನೂರಾರು ಜನ ಪುಣ್ಯಪುರುಷರ ಬಗ್ಗೆ ಘನ ವಿದ್ವಾಂಸರುಗಳಿಂದ ಉಪನ್ಯಾಸವನ್ನೇರ್ಪಡಿಸಿ ಆ ಉಪನ್ಯಾಸವನ್ನೇ ಕಿರು ಹೊತ್ತಿಗೆಯ ರೂಪದಲ್ಲಿ ಹೊರತಂದು ಸುಲಭ ಬೆಲೆಯಲ್ಲಿ ವಿತರಣಗೊಳಿಸುವ ಸಂಕಲ್ಪ ಮಾಡಿದೆ. ಈ ಮಾಲಿಕೆಯಲ್ಲಿ ಸುಮಾರು ಇಪ್ಪತ್ತಾರುಮಂದಿ ಪುಣ್ಯಪುರುಷರ ಪುಸ್ತಿಕಗಳು ಪ್ರಕಟವಾಗಿವೆ. ಆ ಪುಣ್ಯಪುರುಷರುಗಳ ಬದುಕಿನ ದಾಖಲೆಗಳನ್ನು ಮತ್ತು ಅಲ್ಲಲ್ಲಿ ಸುಂದರವಾದ ಭಾವಚಿತ್ರಗಳನ್ನೊಳಗೊಂಡ ಈ ಪುಸ್ತಕಗಳು ಪ್ರತಿಯೊಬ್ಬರೂ ಓದುವಂತವುಗಳಾಗಿವೆ.

ವಿಜಯಾ ಬ್ಯಾಂಕಿನಲ್ಲಿ

## ನಿಮ್ಮ ವಾಣಿಜ್ಯ ವ್ಯವಹಾರವೇ

## ನಮಗೆ ಸಂತಸ



ಹಣ ತೊಡಗಿಸುವ ನಿಮ್ಮ ವ್ಯವಹಾರ ಚಿಕ್ಕದು ಅಥವಾ ದೊಡ್ಡದೆ ಆಗಿರಲಿ, ನಸುನಗೆಯಿಂದ ಶೀಘ್ರವಾಗಿ ಸೇವೆಯಲ್ಲಿ ತೊಡಗುತ್ತೇವೆ.



ಯಾವಾಗಲೂ ನಿಮ್ಮ ತೃಪ್ತಿಯೇ ಮುಖ್ಯ ಗುರಿಯನ್ನಾಗಿ ಹೊಂದಿರುವ ಏಕೈಕ ಬ್ಯಾಂಕ್ ಎಂದರೆ

★ ★ ★

## ವಿಜಯಾ ಬ್ಯಾಂಕ್

(ಭಾರತ ಸರ್ಕಾರದ ಒಡೆತನಕ್ಕೆ ಸಂಪೂರ್ಣವಾಗಿ ಸೇರಿದೆ)

ಪ್ರಧಾನ ಕಛೇರಿ ☞

**2, ರೆಸಿಡೆನ್ಸಿ ರೋಡ್, ಬೆಂಗಳೂರು-560025**

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.



## ಕಸ್ತೂರಿ

### ಬಾರ್ ಸೋಪ್
### ನೀಲಂ ಸೋಪ್



**ಸ್ವಚ್ಛತೆ ಮತ್ತು ಪ್ರಕಾಶಮಾನವಾದ ಬಟ್ಟೆಗಳಿಗೆ**







ತಯಾರಕರು:
ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್, ಮಂಗಳೂರು-575 003

SROM 142

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ

LICENCED TO POST WITHOUT PRE PAYMENT LICENCE NO. 3
Registred with the Registrar of News papers for India under No. 17139/69
Siddaganga Monthly Magazine Siddaganga. Mutt. Reg No. KRN Q-9





